ಕರ್ನಾಟಕ ಕೀರ್ತನ ಗ್ರಂಥಮಾಲೆಯು.

ಪ್ರಥಮ ಪುಷ್ಪ.



ಶ್ರಿಂಗೇರಿಮಠದ ಆದ್ಯಜಗದ್ಗುರುಗಳಾದ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಭಗವತ್ಪಾದ

# ಶ್ರೀಮತ್ ಸುರೇಶ್ವರಾಚಾರ್ಯರ ಚರಿತ್ರ ಕೀರ್ತನವು.



ಭಾಮಿನಿ ಷ|| ಆದ್ಯವಾದೀವೇದಧರ್ಮವ |
ಬೌದ್ಧಧರ್ಮದ ಹೊಡತದೊಳಗೆ ನಿ |
ಬದ್ಧವಾಗಿರೆ ಬಿಡಿಸಿದರು ದೇವೇಶ್ವರರು ಬೇಗ ||
ಆದ್ಯಮಠವಿದು ಆದ್ಯಗುರುವಿವ |
ರಾದ್ಯವಾರ್ತಿಕಕಾರರಿವರೀ |
ಬೌದ್ಧಧರ್ಮದೆ ವೇದಧರ್ಮೋದ್ಧಾರಗೆಯ್ದವರು ||೧||



ಲೇಖಕರು ಹಾಗು ಪ್ರಕಾಶಕರು:—

ಶಂಕರರಾವ ನರಸಿಂಗರಾವ ಕುಲಕರ್ಣಿ-ಮಂಟೂರ.

ಹೆಡ್ ಮಾಸ್ತರ, ಉಣಕಲ್ಲ.

[ಮೊದಲನೆಯಾವೃತ್ತಿ ೧೦೦೦ ಪ್ರತಿಗಳು.]

ಶಕೆ ೧೮೪೫

ಬೆಲೆ ೪ ಆಣೆ

# ಸಮರ್ಪಣ ಪತ್ರಿಕೆಯು.



" ಪಿತೃದೇವೋಭವ "

ಕೈಲಾಸವಾಸಿ

ಪರಮಪೂಜ್ಯ ತೀರ್ಥರೂಪ ಮ. ರಾ. ರಾ.

ನರಸಿಂಗರಾವ ರಂಗರಾವ ಕುಲಕರ್ಣಿ-ಮುಂಟೂರ,

ಇವರ

ನೈಸರ್ಗಿಕವಾದ ಕಾವ್ಯಪ್ರತಿಭಾಹಾಗು ಸಂಗೀತಕಲಾನೈಪುಣ್ಯ

ಮುಂತಾದ ಉಜ್ವಲಗುಣಗಳ ಸ್ಮಾರಕಾರ್ಥವಾಗಿ

ಪರಮಪಿತೃಭಕ್ತಿಯಿಂದ,

ಈ ಮಹನೀಯರ ಚರಣಸನ್ನಿಧಿಯಲ್ಲಿ

ಈ ಗ್ರಂಥವನ್ನು

ಸಮರ್ಪಿಸಿದ್ದೇನೆ.

ಪಿತೃಪಾದ ಸೇವಕ,

ಶಂಕರ.

[ಗ್ರಂಥಕರ್ತ]

# ಪ್ರಸ್ತಾವನೆ.

ಕೀರ್ತನವೆಂದರೆ ಏಕಪಾತ್ರಾತ್ಮಕವಾದ ನಾಟಕವೇ ಸರಿ. ಅರ್ಥಾತ್ ವಾಙ್ಮಯ ದೃಷ್ಟಿಯಿಂದ ಇದು ನೀತಿಪ್ರವರ್ತಕವಾದ ದೃಶ್ಯಕಾವ್ಯವಾಗಿದ್ದು, ಇದಕ್ಕೆ ಸಾಹಿತ್ಯದಲ್ಲಿ ಉಚ್ಚಸ್ಥಾನವು ದೊರೆಯುವದು ಯಥೋಚಿತವಾಗಿದೆ. ಯಾಕಂದರೆ ನಾಟಕಕ್ಕಿಂತಲೂ ಕೀರ್ತನವು ಜನತೆಯಲ್ಲಿ ಧಾರ್ಮಿಕ, ನೈತಿಕ ಜಾಗೃತಿಯನ್ನು ಉಂಟುಮಾಡುವಂಥ ಉದಾತ್ತವಾದ ಸಂಸ್ಥೆಯಾಗಿದೆ. ಈ ಕೀರ್ತನ ಸಂಸ್ಥೆಯ ವಿಷಯವಾಗಿ ಪ್ರಾಚೀನಕಾಲದಿಂದಲೂ ಜನರಲ್ಲಿ ಪವಿತ್ರಭಾವನೆಯುದೆ. ನಾಟಕವನ್ನು ನೋಡುವದಕ್ಕೆ ಎಂದೂ ಹೋಗದಿರುವ ಸಭ್ಯಗೃಹಸ್ಥರು ಕೂಡಾ ಕೀರ್ತನವನ್ನು ಕೇಳುವದಕ್ಕೆ ಮಾತ್ರ ಸಹಕುಟುಂಬ ಸಹಪರಿವಾರ ಪರಮ ಉತ್ಸಾಹದಿಂದ ಹೋಗುತ್ತಾರೆ. ಧರ್ಮಭೂಮಿಯಾದ ನಮ್ಮ ಭರತಖಂಡದಲ್ಲಿ ವ್ಯಾಖ್ಯಾನ, ಪ್ರವಚನ ಹಾಗೂ ಪುರಾಣಗಳನ್ನು ಕೇಳುವದಕ್ಕೆ ಹೋಗುವದಕ್ಕಿಂತಲೂ, ಕೀರ್ತನವನ್ನು ಕೇಳುವದಕ್ಕೆ, ಸ್ತ್ರೀಪುರುಷರು, ಅಬಾಲವೃದ್ಧರು, ಪಂಡಿತಪಾಮರರು ಎಲ್ಲರೂ ಅತಿಶಯ ಆತುರದಿಂದ ಹೋಗುತ್ತಾರೆ; ಮತ್ತು ಕೀರ್ತನವನ್ನು ಕೇಳುವವರ ಮನಸಿನ ಮೇಲೆ, ವ್ಯಾಖ್ಯಾನ, ಪ್ರವಚನಗಳಿಗಿಂತ ಸುಲಭವಾಗಿ ಸುಪರಿಣಾಮವಾಗುತ್ತದೆ. ಇದಕ್ಕೆ ಕೀರ್ತನದಲ್ಲಿದ್ದ ಮನೋಹರವಾದ ಗಂಧರ್ವ ವಿದ್ಯೆಯೇ ಕಾರಣವು. ಆದುದರಿಂದ ನಮ್ಮ ದೇಶದಲ್ಲಿ ಧಾರ್ಮಿಕ ಹಾಗೂ ನೈತಿಕ ಜಾಗೃತಿಯನ್ನುಂಟುಮಾಡಿದ ಸರ್ವಶ್ರೇಯಸ್ಸು ಈ ಕೀರ್ತನಸಂಸ್ಥೆಗೇ ಸಲ್ಲತಕ್ಕದೆಂದು ಹೇಳಿದರೆ ಅತ್ಯುಕ್ತಿಯಾಗದು. ಇಂಥ ಪರಮ ಕಲ್ಯಾಣಕಾರಿಯಾದಂಥ, ಅತಏವ ಪವಿತ್ರವಾದಂಥ, ಈ ಕೀರ್ತನಸಂಸ್ಥೆಯನ್ನು ಅಭಿವೃದ್ಧಿಪಡಿಸುವದು ಪ್ರತಿಯೊಬ್ಬ ಭಾರತೀಯನ ಕರ್ತವ್ಯವಾಗಿದೆ.

ಇನ್ನು ಈ ಕೀರ್ತನ ಸಂಸ್ಥೆಯ ಅಭ್ಯುದಯಾಕಾಂಕ್ಷಿಗಳಾದ ಶ್ರೀಮಾನ್ ರಾಜಸಭಾಭೂಷಣ ಕರ್ಪೂರ ಶ್ರೀನಿವಾಸರಾಯರು ಮಾಡಿದ ವಿಶೇಷ ಪ್ರಯತ್ನದಿಂದ ಬೆಂಗಳೂರಲ್ಲಿ ಶ್ರೀಮಾನ್ ವ್ಹಿ. ಪಿ. ಮಾಧವರಾಯರ ಅಧ್ಯಕ್ಷತೆಯಲ್ಲಿ ನೆರದ ಕೀರ್ತನ ಸಮ್ಮೇಳನವೇ ಕರ್ನಾಟಕದಲ್ಲಿಯ ಮೊದಲನೆಯ ಪ್ರಯತ್ನವು; ಈ ಸಮ್ಮೇಳನದ ಉದ್ದೇಶವು ಕಾರ್ಯತಃ ಇದುವರೆಗೆ ಏನೂ ಜರುಗದೆ ಇದ್ದದರಿಂದ ಈಗ ನಮ್ಮ ಕೇವಲ ವೈಯಕ್ತಿಕ ಪ್ರಯತ್ನದಿಂದಲೇ ಈ [illegible]ತ್ಕಾರ್ಯವನ್ನು ನೆರವೇರಿಸುವ ಸಾಹಸವನ್ನು ಮಾಡಿದ್ದೇವೆ. ಇವತ್ತಿನವರೆಗೆ ಉತ್ತರ ಕರ್ನಾಟಕದಲ್ಲಿ ಕೇವಲ

ಮಹಾರಾಷ್ಟ್ರಪದಗಳನ್ನೇ ಪ್ರಾಧಾನ್ಯವಾಗಿಟ್ಟುಕೊಂಡು ಕನ್ನಡದಲ್ಲಿ ಕೀರ್ತನ ಮಾಡುವ ರೂಢಿಯು ಪ್ರಚಾರದಲ್ಲಿದೆ. ಇತ್ತ ದಕ್ಷಿಣಕರ್ಣಾಟಕದಲ್ಲಿ ನಾರದಋಷಿಗಳಿಂದ ಪ್ರಣೀತವಾದಂಥ ಕೀರ್ತನಸಾಂಪ್ರದಾಯಕ್ಕೆ ವಿರುದ್ಧವಾಗಿ ಕೇವಲ ಮನೋರಂಜನಕ್ಕೋಸ್ಕರವಾಗಿಯೇ ಮಾಡುವ ಸದೋಷಪದ್ಧತಿಯು ಕಂಡುಬರುತ್ತದೆ. ಇವೆರಡೂ ದೋಷಗಳನ್ನು ಹೋಗಲಾಡಿಸುವದಕ್ಕೋಸ್ಕರ ಸಾಂಪ್ರದಾಯಸಿದ್ಧವಾಗಿ ಬಂದಿರುವ ಕೀರ್ತನಪದ್ಧತಿಯನ್ನನುಸರಿಸಿ ಕೇವಲ ಕನ್ನಡ ಪದಗಳಿಂದಲೇ ಕೀರ್ತನವನ್ನು ರಚಿಸಿ, ಕನ್ನಡ ರಂಗಭೂಮಿಯಮೇಲೆ ತರುವದು ಅತ್ಯವಶ್ಯವಾಗಿದೆ. ಆದುದರಿಂದ ಪೌರಾಣಿಕ, ಐತಿಹಾಸಿಕ ಆಖ್ಯಾಯಿಕೆಗಳನ್ನು ತೆಗೆದುಕೊಂಡು ಸಶಾಸ್ತ್ರವಾದ ಕೀರ್ತನಗಳನ್ನು ಕನ್ನಡ ಪದಗಳಿಂದ ರಚಿಸಿ "ಕರ್ಣಾಟಕ ಕೀರ್ತನ ಗ್ರಂಥಮಾಲೆ" ಎಂಬ ಹೆಸರಿನಿಂದ ಪ್ರಸಿದ್ಧಮಾಡುವವರಿದ್ದೇವೆ. ಈ ಗ್ರಂಥಮಾಲೆಯಲ್ಲಿ ಶ್ರೀಮತ್‌ಸುರೇಶ್ವರಾಚಾರ್ಯರ ಚರಿತ್ರಕೀರ್ತನವು ಮೊದಲನೆಯ ಗ್ರಂಥವಾಗಿದೆ. ಪೂರ್ವಪೀಠಿಕೆಯು ಸತ್ಪುರುಷಪ್ರಣೀತವಾದ ಪದ್ಯಗಳಿಂದಲೇ ರಚಿಸಲ್ಪಡುವಂಥಾದ್ದಾದ್ದರಿಂದ, ಈ ಪೂರ್ವರಂಗವನ್ನು ಕೀರ್ತನಕಾರರೇ ದೇಶ ಕಾಲಪರಿಸ್ಥಿತಿಗನುಸರಿಸಿ ನಿರ್ಮಿಸಿಕೊಳ್ಳಲೆಂದು ಇದರಲ್ಲಿ ಸೇರಿಸಿರುವದಿಲ್ಲ. ಪೂರ್ವಪೀಠಿಕೆಯು ಸಹ ಕೀರ್ತನಪುಸ್ತಕದಲ್ಲಿರಬೇಕೆಂದು ವಾಚಕರು ಅಪೇಕ್ಷಿಸಿದಲ್ಲಿ ಈ ಪುಸ್ತಕದ ೨ನೆಯಾವೃತ್ತಿಯಲ್ಲಿ ಸೇರಿಸುವೆವು. ಇದೇ ಮೇರೆಗೆ ಧ್ರುವಚರಿತ್ರ, ಸುಭದ್ರಾಕಲ್ಯಾಣ, ವತ್ಸಲಾಹರಣ, ಉಷಾಸ್ವಯಂವರ, ಪದ್ಮಾವತೀಪರಿಣಯ, ವಿದ್ಯಾರಣ್ಯಚರಿತ್ರ, ಮಹಾಸ್ವಾಮಿ ಚಿದಂಬರದೀಕ್ಷಿತರ ಚರಿತ್ರ, ಶ್ರೀಶೇಷಾಚಲಮಹಾರಾಜರ ಚರಿತ್ರ, ಶ್ರೀ ಬಸವೇಶ್ವರರಚರಿತ್ರ, ಶ್ರೀ ಮಹಾವೀರರಚರಿತ್ರ, ಇವೇ ಮೊದಲಾದ ಕೀರ್ತನಗಳನ್ನು ರಚಿಸಿದ್ದೇವೆ. ಈ ಮೊದಲು ಕನ್ನಡದಲ್ಲಿ ಜೈನ, ಲಿಂಗವಂತ, ಬ್ರಾಹ್ಮಣ ಕವಿಗಳು ಅನೇಕ ಕಾವ್ಯನಾಟಕಗಳನ್ನು ಬರೆದು ಕನ್ನಡಭಾಷಾಸೇವೆಯನ್ನು ಅತ್ಯುತ್ಕೃಷ್ಟವಾಗಿ ಮಾಡಿದ್ದೇನೋ ನಿಜವು; ಆದರೆ ಕನ್ನಡದಲ್ಲಿ ಕೀರ್ತನ ರಚನೆಯನ್ನು ಮಾತ್ರ ಯಾರೂ ಮಾಡಿರುವದಿಲ್ಲ. ಈ ದೃಷ್ಟಿಯಿಂದ ಈ ನಮ್ಮ ಕೀರ್ತನಗ್ರಂಥಮಾಲೆಯ ಪ್ರಯತ್ನವು ಅಪೂರ್ವವಾದುದೇ ಸರಿ; ಇಂಥ ಉಪಯುಕ್ತ ಗ್ರಂಥಮಾಲೆಗೆ ಪ್ರಾಚೀನ ಸಂಸ್ಕೃತಿಯ ಅಭಿಮಾನಿಗಳಾದ ಸಮಸ್ತ ಕನ್ನಡಿಗರು ಉದಾರಾಶ್ರಯವನ್ನು ಕೊಟ್ಟರೆ, ಈಗ ರಚಿಸಿ ಬರೆದಿಟ್ಟಿರುವ ಕೀರ್ತನಗಳನ್ನು ಪ್ರಸಿದ್ಧಪಡಿಸುವದಲ್ಲದೆ. ಇನ್ನೂ ಅನೇಕ ಪೌರಾಣಿಕ, ಐತಿಹಾಸಿಕ ಕೀರ್ತನಗಳನ್ನು ರಚಿಸಿ ಪ್ರಸಿದ್ಧಮಾಡಬೇಕೆಂದು ಉತ್ಕಟವಾದ ಇಚ್ಛೆಯದೆ. ಈ

ಇಚ್ಛೆಯನ್ನು ಪೂರ್ಣಮಾಡುವ ಭಾರವು ನಮ್ಮ ಕನ್ನಡ ಬಂಧುಗಳ ಮೇಲೆಯೇ ಅದೆ.

ಇನ್ನು ಪ್ರಸ್ತುತ ಸುರೇಶ್ವರಾಚಾರ್ಯರ ಚರಿತ್ರಕೀರ್ತನವು ಶಕೆ ೧೮೪೪ ದುಂದುಭಿಸಂವತ್ಸರ ಮಾಘಶುದ್ಧ ೧೨ನೆಯದಿವಸ ಅಗಡಿಯಲ್ಲಿ ಜರುಗಿದ ಶ್ರೀಮತ್ ಸುರೇಶ್ವರಾಚಾರ್ಯರ ಪುಣ್ಯತಿಥಿಯ ಮಹೋತ್ಸವಕ್ಕೋಸ್ಕರ ಶ್ರೀಯುತ ನಾರಾಯಣ ಶ್ರೀನಿವಾಸ ರಾಜಪುರೋಹಿತ ಅಗಡಿ ಇವರು ತಾವು ರಚಿಸಿದ ಶ್ರೀ ಸುರೇಶ್ವರಾಚಾರ್ಯರ ಚರಿತ್ರವನ್ನು ಕೊಟ್ಟು ಉತ್ಸವದಲ್ಲಿ ನನಗೆ "ನೀವು ಈ ಚರಿತ್ರದ ಕೀರ್ತನವನ್ನು ರಚಿಸಿ, ನೀವೇ ಈ ಕೀರ್ತನ ಮಾಡಬೇಕೆ"ಂದು ಆಗ್ರಹ ಮಾಡಿದ ಪ್ರಯುಕ್ತ ರಚಿಸಲ್ಪಟ್ಟಿತು; ಮತ್ತು ಆ ಉತ್ಸವದಲ್ಲಿ ಪರಮಪೂಜ್ಯ ಚಿದಂಬರ ಮೂರ್ತಿಗಳವರು. ವೇ. ಶಾ. ಸಂ. ಚಿದಂಬರದೀಕ್ಷಿತ ಬಡ್ಲಿ ಪ್ರಭೃತಿಗಳ ಸನ್ನಿಧಿಯಲ್ಲಿ ಈ ಕೀರ್ತನವನ್ನು ಮಾಡಿ ತೋರಿಸಿದೆವು. ಮುಂದೆ ಕೆಲವು ದಿನಗಳಮೇಲೆ ಕರ್ಣಾಟಕದ ಕೀರ್ತನಕಾರರಲ್ಲಿ ಅಗ್ರಗಣ್ಯರಾದ ಸುಪ್ರಸಿದ್ಧ ವೇ. ಶಾ. ಸಂ. ಮುಳಗುಂದ ರಾಮಶಾಸ್ತ್ರಿಗಳವರ ಎದುರಿಗೆ ಈ ಕೀರ್ತನವನ್ನು ಓದಿ ತೋರಿಸಿದೆವು. ಆಗ ರಾಮಶಾಸ್ತ್ರಿಗಳವರು, ಈ ಕೀರ್ತನದ ವಿಷಯವಾಗಿ ಉತ್ತಮ ಅಭಿಪ್ರಾಯ ವ್ಯಕ್ತಪಡಿಸಿ, ಇದನ್ನು ಮುದ್ರಿಸಿ ಪ್ರಸಿದ್ಧಪಡಿಸಬೇಕೆಂದು ಸೂಚಿಸಿದ್ದರಿಂದಲೂ, ಉಳಿದ ಮಹಾಜನಗಳೆಲ್ಲರೂ ಶಾಸ್ತ್ರಿಗಳವರಂತೆ ಅಭಿಪ್ರಾಯಪಟ್ಟದ್ದರಿಂದಲೂ, ಈ ಗ್ರಂಥವನ್ನು ಮುದ್ರಿಸಿ, ನಮ್ಮ ಕನ್ನಡ ಕೀರ್ತನ ಗ್ರಂಥಮಾಲೆಯನ್ನು ಪ್ರಾರಂಭ ಮಾಡಿದ್ದೇವೆ.

ಈ ಪ್ರಸ್ತುತ ಕೀರ್ತನವನ್ನು ರಚಿಸುವದಕ್ಕೆ ಪ್ರವರ್ತಕರಾದ ಶ್ರೀಯುತ ನಾ. ಶ್ರೀ. ರಾಜಪುರೋಹಿತ ಇವರಿಗೂ, ಈ ಕೀರ್ತನವನ್ನು ಓದಿನೋಡಿ ಪ್ರೇಮಯುಕ್ತವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿ, ಪ್ರೋತ್ಸಾಹನೆ ಕೊಟ್ಟದ್ದಕ್ಕಾಗಿ ವೇ. ಬ್ರ. ಶ್ರೀ ಮುಳಗುಂದ ರಾಮಶಾಸ್ತ್ರಿಗಳವರಿಗೂ ಕೃತಜ್ಞನಾಗಿದ್ದೇನೆ. ಇದೇ ಮೇರೆಗೆ ಈ ಪುಸ್ತಕವನ್ನು ವೇಳೆಗೆಸರಿಯಾಗಿ ಮುದ್ದಾಗುವಂತೆ ಮುದ್ರಿಸಿ ಕೊಟ್ಟದ್ದಕ್ಕೋಸ್ಕರ ಶ್ರೀ ಶೇಷಾಚಲ ಪ್ರಿಂಟಿಂಗಪ್ರೆಸ್ಸಿನ ಮ್ಯಾನೇಜರರಾದ ಶ್ರೀಯುತ ಭಿ. ಪ. ಕಾಳೆ ಮತ್ತು ಚಂದ್ರಿಕೆಯ ಉಪಸಂಪಾದಕರಾದ ಶ್ರೀಯುತ ಆರ್. ಟಿ. ಕರ್ಪೂರ ಇವರಿಗೂ ಆಭಾರಿಯಾಗಿದ್ದೇನೆ. ಈ ಕಾರ್ಯವನ್ನು ನಿರ್ವಿಘ್ನತೆಯಿಂದ ಕೊನೆಗಾಣಿಸಿ ಕೊಟ್ಟದ್ದಕ್ಕಾಗಿ ಶ್ರೀ ಮಾಲತೀಶನನ್ನು ಅನನ್ಯಭಾವದಿಂದ ಪ್ರಾರ್ಥಿಸಿ ಈ ಪ್ರಸ್ತಾವನೆಯನ್ನು ಮುಗಿಸುತ್ತೇನೆ.

ಕನ್ನಡ ಭಾಷಾಸೇವಕ,

ಶ. ನ. ಕುಲಕರ್ಣಿ-ಮಂಟೂರ.

# ಶುದ್ಧಿಪತ್ರಿಕೆ.



| ಪುಟ | ಪಙ್ತಿ | ಅಶುದ್ಧ | ಶುದ್ಧ |
|---|---|---|---|
| ೨ | ೨೬ | ವಿಶ್ವರೂಪಾಚಾರ್ಯರ | ವಿಶ್ವರೂಪಾರ್ಯರ |
| ೩ | ೨೭ | ಮನ್ನಣಿ | ಮನ್ನಣೆ |
| ೪ | ೪ | ಭಾರತಿಯು | ಭಾರತಿ |
| ೪ | ೭ | ಮುದದಿಂ | ಮುದದಿ |
| ೪ | ೨೪ | ರಾಮಾಜನರೀಕ್ಷಿಸಿ | ರಾಮಾಜನರೀಕ್ಷಿಸೆ |
| ೫ | ೧೪ | ಸುಮಶರನಿಗೆ ವರರಮಣಿ | ಸುಮಶರಪಿತನಿಗೆ ರಮಣಿ |
| ೭ | ೭ | ಸ್ತುಪಂಗಳುಮಂ | ಸ್ತೂಪಂಗಳುಮಂ |
| ೧೧ | ೧೬ | ತಾಸುಖದುಃಖಗಳ | ತಾಂ ಸುಖದುಃಖಂಗಳ |
| ೧೨ | ೨೦ | ರಾಜವ್ಯಾಸ | ರಾದವ್ಯಾಸ |
| ೧೫ | ೧೧ | ಪೇಳಿರೀ | ಪೇಳಿರಿ |
| ೨೧ | ೮ | ಪೂರ್ವಾಶ್ರಮದೊಳ್ಪೂರ್ವ | ಪೂರ್ವಾಶ್ರಮದೊಳಪೂರ್ವ |



# ಶ್ರೀಮತ್ ಸುರೇಶ್ವರಾಚಾರ್ಯರ ಚರಿತ್ರ ಕೀರ್ತನ.



## ಪೀಠಿಕಾರಂಭದ ಪದವು.



ಪದ—ರಾಗ ಬೇಹಾಗ ತಾಳ—ಆದಿ

ಬೆಳೆಯಲಧರ್ಮವು ಮಾಧವನು । ತಳೆಯುವ ತಾನವತಾರವನು ।। ಪಲ್ಲ ।।

ಬೆಳೆಯಲುಗರ್ವ ರಸಾತಳಕ್ಕೈದಿದ ।
ಖಳರೊಳಧಿಕ ತಾ ರಾವಣನು ।।
ಮೊಳೆಯುತ ಧರ್ಮದ ಮೂರ್ತಿಯು ನಾಶವ ।
ಗೊಳಿಸುತ ಧರ್ಮವ ಸ್ಥಾಪಿಸನು ।।೧।।

ಇಳೆಯೊಳು ಖಳಜನಕಳುಕುವಂತೆ ಬುಧ ।
ಕಿಳೆಯುತ ಧರ್ಮದ ಹೊಳೆಯಿಂದ ।।
ಘಳಿಲನೆ ತಾ ಶಶಿಮೌಳಿಯು ಧಾತ್ರಿ ।
ತಳವನುದ್ಧರಿಪನು ಮುದದಿಂದ ।। ೨ ।।

ಕಾಮಾರಿಯು ಮಲ್ಲಾರಿಯುಮೇಣ್ ।
ಭಸ್ಮಾಸುರವೈರಿಯು ಈ ವಿಧದೆ ।।
ಭೂಮಿಯೊಳಂ ನಿಸ್ಸೀಮತೆಯಿಂದಲಿ ।
ಕಾಯ್ದ ಪುರಾರಿ ಲೋಕೋದ್ಧಾರಿ ।।೩।।

ಸುರೇಶ್ವರಾಚಾರ್ಯರ ಅವತಾರಕ್ಕಿಂತ ಮೊದಲು ಭರತಖಂಡದ ಸ್ಥಿತಿಯು.—

ಪದ—'ಆನಂದಾಚಾ ಕಂದ ಹರಿ ಹಾ ದೇವಕಿನಂದನ ಪಾಹಿಲಾ'

ಎಂಬ ಪುಂಡಲೀಕ ನಾಟಕದೊಳಗಿನ ಪದದಂತೆ:—

ವೇದಧರ್ಮದೂಷಣೆಯನ್ನು | ಬೌದ್ಧರು ಸಾರುವತೆರವನ್ನು ||ಪಲ್ಲ||
ವಾದದಿಂದ ವರಸಾಧು ಮತಗಳನು | ಭೇದಬುದ್ಧಿಯಿಂ ಭೇದಿಪರು ||ಅ.ಪ||
ಒಂದೆರಡಲ್ಲವು ಮಂಡಲದೊಳು ತಲೆ | ಗೊಂದುಮತವ ಪ್ರತಿಪಾದಿಸರು||
ಸುಂದರ ತನುವನ್ನಂದಗೆಡಿಪಪರ | ಸುಂದರಿ ಮಧುವಂ ಸೇವಿಪರು ||೧||
ತಾಪವನೀಯುತ ಭೂಸುರವೃಂದಕೆ | ಕೋಪದಿಂದವರ ಕೊರಳನ್ನು ||
ಕಾಪಾಲಿಕರೀಪರಿ ಭೇದಿಸಿವೂ | ಜಿಪರೈ ತಾವ್ ಭೈರವನನ್ನು ||೨||
ಈ ತೆರದೊಳ್ ಧರ್ಮಗ್ಲಾನಿಯು ನೆರೆ| ಭಾರತವನು ವ್ಯಾಪಿಸಿರಲ್ಕೆ ||
ಶ್ರೀ ಕುಮಾರಿಲ ಸುರೇಶ್ವರವತರಿಸಿ | ವೇದ ಧರ್ಮವುದ್ಧರಿಸಲ್ಕೆ ||೩||

ಶ್ರೀ ವಿಶ್ವರೂಪಾಚಾರ್ಯರ ಜನನ:—

ಸಾಕಿ:—ಮಾಹಿಷ್ಮತಿಯೊಳ್ ಮಹಾತಪಸ್ವೀ ಹಿಮಮಿತ್ರಾಹ್ವಯವಿಪ್ರಂ |
ಗೃಹಸ್ಥಾಶ್ರಮದೊಳಿರ್ದತಿಥಿಗಳನು | ಮಹಾತ್ಮರೆಂದರಿದಿರ್ದಂ ||೧||
ಸಂಚಿತಪುಣ್ಯಾದೆಯವತರಿಸಿದನುವಿ | ರಂಚಿಯಾತನುದರದೊಳು ||
ಇಂಚರದಿಂದ ಪ್ರಪಂಚವಮೋಹಿಪ| ವಿಶ್ವರೂಪನಾಮದೊಳು ||
ಬೆಳೆದನು ಇಳೆಯೊಳಗೆ | ಷೋಡಶಕಳೆಯೂಣ್ಮನ ಬೆಳಗೆ ||೨||

ಉಪನಯನ ವಿದ್ಯಾಭ್ಯಾಸಗಳು:—

ದಿಂಡಿ| ಐದು ವರುಷದೊಳುಪನಯನವನ್ನು ಮಾಡಿ |
ಮೋದದಿ ಗುರುಕುಲಕೆ ಮಗನ ನೀಡೆ ||
ಆದರದೊಳ್ ಮಧುಕರಿಯ ತಾನು ಬೇಡಿ |
ತೇದುಮೆಯ್ಯನು ಹದಿನಾಲ್ಕು ವಿದ್ಯೆ ತೀಡಿ ||೩||

ಉಭಯಭಾರತಿಯ ಜನನ:—

ಸಾಕಿ:—

ಶೋಣಾಪುನ್ನದ ತೀರದೆ ಬ್ರಾಹ್ಮಣವಿಷ್ಣುಮಿತ್ರನುದರದೊಳು |
ವೀಣಾಪಾಣಿಯು ಜನಿಸಿಹಳುಭಯಭಾರತಿಯಭಿಧಾನದೊಳು ||೪||

ಉಭಯಭಾರತಿಯು ವಿಶ್ವರೂಪರ ವಿದ್ವತ್ತೆಯನ್ನು ಕೇಳಿ ಅನುರಾಗಪಟ್ಟದ್ದು:—

ಶ್ರೀ ವಿಶ್ವರೂಪಾಚಾರ್ಯರ ಕೀರ್ತಿಕೇಳಿ | ಶ್ರೀಭಾರತೀ ದೇವಿಯು ಮೋದತಾಳಿ||
ಆ ವಿಶ್ವರೂಪಾಖ್ಯರನು ದುದೆಯಲ್ಲಿ | ಆ ವಿದ್ಯಾದೇವಿ ಮನವನು ತಂದಳಲ್ಲಿ || ೫ ||

ಶ್ರೀವಿಶ್ವರೂಪ ಉಭಯಭಾರತಿ ಇವರು ವಿವಾಹೇಚ್ಛೆಯಿಂದ ಕೃಶರಾದದ್ದು:—

ಭಾಮಿನಿಷಟ್ಪದಿ,

ಇಂತಿರಲು ತಮ್ಮೊಳು ಪರಸ್ಪರ |
ಚಿಂತೆಯನು ತಾಳುತ್ತ ಮನದೊಳು |
ಕಂತುರತಿಸಮರೂಪಲಾವಣ್ಯಾಂಬುನಿಧಿಗಳುತಾವ್ ||
ಎಂತು ದೊರೆದಪರೆಂಬತಳಮಳ|
ದಿಂತಗುಳ್ದುದು ಒಡಲಶಿರಿಯು |
ತ್ಯಂತದುಗುಡದೆಬೇವುತಿರ್ಪರುಪೇಳ್ವೆನೇನದನ ||೬||

ಮಗನು ಸೊರಗಿದ ಕಾರಣವನ್ನು ಹಿಮಮಿತ್ರನು ಕೇಳುತ್ತಾನೆ:—

ಪದ—ಬೇಹಾಗ, ತಾಳ—ಆದಿ.

ಏನುಮನೋಗತ ವಿಶ್ವರೂಪನೆ ||ಪಲ್ಲ|| ಸಾನುರಾಗದೊಳು ಮಾನಸಿಕತೆಯನು |
ಮಾನವ ತೊರೆಯುತನೀಸೊರೆಯುವದೈ ||ಅನುಪಲ್ಲ||
ತನುಜಾತನೆತವತನುವಿನ ಕಾಂತಿಯು | ತವೆಮಾಣ್ದಿಹ ಕಾರಣವೇನೈ ||
ಮನಭಾರತಿಯೊಳ್ ಜನಕನೆ ನೆಲಸಿಹುದಿ| ದು ಕೊರಗಲು ತಾಂ ಕಾರಣವೈ ||೧||

ಇತ್ತ ವಿಷ್ಣುಮಿತ್ರನು ತನ್ನ ಮಗಳಾದ ಉಭಯಭಾರತಿಯು ಕೃಶವಾದ ಕಾರಣವನ್ನು ಕೇಳುತ್ತಾನೆ:—

"ನಾಮಾಯಾ ರಮಣಿರಾಜಿಸುವೆ" ಎಂಬ ಕನ್ನಡ ಮನೋವಿಜಯ ನಾಟಕದೊಳಗಿನ ಪದದಂತೆ

ಬಾಬಾ ಭಾರತಿಯೆ | ಬಾ ಬೇಗನೆ ನೀ || ಪಲ್ಲ ||
ಬಾಡಿಹುದೀವೊಗನಾಡೆ ಶರೀರವು ಬೀಡಾದಂತಿರೆ ರೋಗಕೆ ||
ಈಡಾಗಿಹ ತಾಪದ ಕಾರಣಮರೆಮಾಡದೆ ಮತ್ಸುತೆ ಪೇಳ್ವುದು ||೧||
ತಂದೆಯೆ ಎನ್ನಯ ಸುಂದರತನು ವಿದು ಬೆಂದಿಹ ಕಾರಣ ಕೇಳ್ವುದು|
ಕಂದರ್ಪನ ಸಮಸುಂದರ ಹಿಮಸಖಕಂದನ ಪೊಂದಲು ಬೇಳ್ಪುದು||೨||

ಹಿಮಮಿತ್ರರು ಮಗನ ಮನೋಗತವನ್ನು ತಿಳಿದು ಕನ್ಯಾನಿಶ್ಚಯವನ್ನುಮಾಡುವದಕ್ಕಾಗಿ ಬ್ರಾಹ್ಮಣರೀರ್ವರನ್ನು ವಿಷ್ಣುಮಿತ್ರರ ಪಟ್ಟಣಕ್ಕೆ ಕಳಿಸಿದ್ದು:—

ಸಾಕಿ|| ಕನ್ಯಾನಿಶ್ಚಯವನ್ನು ಮಾಳ್ಪುದಕೆ ಜನ್ನಿಗ ವಿಪ್ರರುಜವದಿ ||
ಮನ್ನಣೆ ಪೊಂದಿಹ ವಿಷ್ಣುಮಿತ್ರದ್ವಿಜ ಸನ್ನಿಧಿ ಸೇರ್ದರು ಮುದದಿ||
ಪೇಳಿದರಭಿಮತವ | ಕೇಳುತಲಿತ್ತನು ಸಮ್ಮತವ ||೭||

ಸುತೆಯೋ ಹಿಮಸಖ ಸುತನಿಗೆ ನಿನ್ನನು ಹಿತದಿಂ ಬೇಳ್ಪರು ಕೇಳೌ ||
ತಾತನೆ ವಿಹಿತವು ದಶಮೀ ತಿಥಿಯು ಪ್ರ | ಶಸ್ತವು ಲಗ್ನಕೆ ತಿಳಿಯೈ ||
ಭಾರತಿಯು ಪತ್ರಿಕೆಯ | ಪುರೋಹಿತಗಿತ್ತಳು ಕೇಳ್ವರಿಯ ||೮||

ಲಗ್ನಪತ್ರಿಕೆಯಂ ಕೊಂಡು ಮಾಹಿಷ್ಮತಿಗೆ ಬಂದರು:—

ದಿಂಡಿ|| ಮದುವೆಯ ಕಾಲವನು ಗೊತ್ತುಮಾಡಿ |
ಮುದದಿಂ ಮಾಹಿಷ್ಮತಿಗೆ ಬಿಜಯಮಾಡಿ ||
ಒದಗಿಸಿ ಸಾಮಗ್ರಿ ಲಗ್ನಕಾಗಿ |
ಸದಮಲ ಆಪ್ತೇಷ್ಟಸಹಿತರಾಗಿ ||೯||

ಹಿಮಮಿತ್ರರು ನಿಬ್ಬಣದೊಡನೆ ವರಸಮೇತರಾಗಿ ಶೋಣನದದ ತೀರಕ್ಕಾಗಮಿಸಿದ್ದು.

'ಏನು ಮಾತನಾಡುವಿಯೋ ಮಾನಹೀನನೆ' ಎಂಬ ಕೀಚಕವಧ ನಾಟಕದೊಳಗಣ ಪದದಂತೆ.

ಬಂದರೈ ಜವದಿಂದ ಬೀಗರು ಚಂದದಿಂದಲಿ ||ಪಲ್ಲ||
ನಂದದೆ ಶೋಣಾತೀರಕೆ |
ಬಂಧುಬಳಗಸಂದಣಿಯೊಳ್ ಕಂದನ ಲಗ್ನಕೆ ಪಯಣದೆ ||ಅ. ಪ||
ಹಿಮಮಿತ್ರನು ಸುಮುಹೂರ್ತದೆ | ಮಮತೆಯಲೀ ತನ್ನ ಸುತನ ||
ವಿಮಲಾಶ್ವವನೇರಿಸಲ್ಕೆ |
ರಮಣೀಯತೆಯಿಂದ ಮೆರೆದು ರಮಣಿಯರಾರತಿ ಬೆಳಗಲು ||೧||
ಆಗತರಾಗಿಹ ಬೀಗರ | ಸ್ವಾಗತವನು ಮಾಳ್ಪುದಕೆ ||
ಸಾಗಿ ವಿಷ್ಣುಮಿತ್ರ ಮಂಗಲಕರ |
ಭೋಗ್ಯವಸ್ತುನಾದದೊಡನೆ ಭಾಗ್ಯಶಾಲಿವರನೀಕ್ಷಿಸೆ ||೨||
ಸೇವಾಂತದೆ ವರಪೂಜೆಯ | ಪ್ರೇಮದೆ ಪ್ರಿಯಪತ್ನಿಯೊಡನೆ ||
ತಾಂ ಮಾಡುತ ಸಂಭ್ರಮದೊಳು |
ರಾಮಾಜನರೀಕ್ಷಿಸಿ ನಯನಾಭಿರಾಮಮಾಗಿ ತೋರೆ ||೩||
ಪುರದಲಿ ವರವೈವಾಹಿಕ ಗುರುತುಗಳಂ ತೋರ್ಪತೆರದಿ |
ನೆರೆತೋರಣ ತಳಿರು ಮಿಳಿರೆ |
ತ್ವರದಲಿ ವರನಿಗೆ ರುಖವತ ಗುರುಕುಚೆಯುನೇರವೇರಿಸೆ ||೪||
ಮದುವೆಯ ವೇಳೆಯು ಒದಗಲು ಮುದದೊಳ್ವರ ಕುದುರೆಯೇರಿ |
ಚದುರ ವಧುಗಳೊಡನೆ ಶ್ವಶುರ |

ಸದನಕೆ ಬರೆ ಕದಲಾರತಿ ಸುದತಿಯರ್ನಿವಾಳಿಸೆಗೆಯೆ ||೫||
ಸುಂದರವಧು ಭಾರತಿತಾಂಬಂದು ವಿಶ್ವರೂಪನೆದುರೋಳ್ ||
ಚಂದದಿ ಕುಳಿತಿರೆ ವಿಪ್ರರು | ಅಂದರು ವರಮಂಗಲಾಷ್ಟಕಂ |
ದಳೆವರ್ ಮುಕ್ತಾಕ್ಷತೆ ||೬||

ಅಕ್ಷತೆರೋಪಣದ ತರುವಾಯ ಲಾಜಾಹೋಮ, ಸಪ್ತಪದಿಗಳಾದ ಮೇಲೆ ಭೂಮದಲ್ಲಿ ಕುಳಿತಾಗ(ವಧೂವರರು ಆಪ್ತೇಷ್ಟರು ಸಹಿತ)ಹಾಡುವದು:—

ಉಭಯಭಾರತಿ(ಕನ್ಯೆ)ಯ ಕಡೆಯವರು ಹಾಡಿದರು.

ಎಂಥಾ ಅಳಿಯನೆ ಇಂಥವನೆಲ್ಲಿಯೂ ಕಾಣೆನೆ ||
ಕಂತುಸಮರೂಪನಿವನು | ಅಂತರಾತ್ಮದ ಪಂಥವ ಗೆಲಿದಿಹ ||ಪಲ್ಲ||
ಭಾರತಿಸು ಕುಮಾರಿ ವಿದ್ಯಾ | ಮಾರುತಿ ಸುವಿಚಾರಿ |
ಕೋರಿದಳಿವನನು ಶಾರದೆ ವಿಧಿಯವತಾರವಲ್ಲದೆ ಬೇರೆ ಮನುಜನೆ ||೧||
ಹಿಮಮಿತ್ರರು ತಾವು ಗೆಲಿದರು ಕಮನೀಯಾ ಕೃತಿಯ | ವಿಮಲೆ ಭಾರತಿ
ಯ ಸಮ ಸೊಸೆ ಯಿವರಿಗೆ | ಸುಮಶರನಿಗೆ ವರರಮಣಿ ರತಿಯುವೊಲು ||||೨||
ಶ್ರಿವಿಶ್ವರೂಪರು ತಾವ್ ಸ್ವಾಭಾವಿಕ ಚಲುವರು | ಈ ವಿಶ್ವದ ಜನರೂಪ||
ಒಬ್ಬುಳಿಯಾಗಿ ಈ ವಧುಭಾರತಿದೇವಿಯಾಗಿಹಳು ||೩||

ಊಟಣಿಯ ಹಾಡು:—

ಜಯ ಹಿಮಮಿತ್ರಕುಮಾರ | ಜಯ ಜಯ ಭಾರತಿಯ ವರ |
ಜಯ ಜಯ ಕಲ್ಯಾಣಕರ | ಜಯ ಜಯ ಮನೋಹರ ||ಪಲ್ಲ||
ಜನಿಸುತ ಮಾಹಿಷ್ಮತಿಯೊಳ್ |ಜನಕನ ಪಾವನಗೆಯ್ದಿ ||
ಕನಕಗರ್ಭ ನಿನ್ನ ಕೈ ತಾ ಗಂಧವ ಹಚ್ಚುವೆ ನಾನು ||೧||
ಮಧುಕರಿಯಿಂ ಹೃದಯದೊಳು | ಹದಿನಾಲ್ಕು ವಿದ್ಯೆಗಳಂ ||
ಪದುಳದೆ ಧರಿಸಿದ ಎದೆ ತಾ ಪರಿಮಳ ಹಾಕುವೆ ನಾನು ||೨||
ಧನಕನಕಾಶೆಯ ತೊರೆದು | ಮನಸಿಜರಾಯನನೊದೆದು ||
ವನಮೂಲಿಯ ಸುತ | ವನಮಾಲೆಯ ಕೊರಳೊಳ್ ಹಾಕುವೆ ನಾನು ||೩||
ಎನ್ನಯ ಕೀರ್ತಿಯ ಕೇಳಿ | ಅನ್ನಪಾನಂಗಳನು ||
ಮುನ್ನವೆ ತೊರೆದಿಹ ಚನ್ನಿಗರೂಪನೆ ಮನ್ನಣೆ ವೀಳ್ಯೆ ಪಿಡಿ ||೪||
ವೇದಧರ್ಮವ ನೀನು | ಸಾಧಿಸಿ ಯುದ್ಧರಿಸಂಥ ॥
ವೇದಮೂರ್ತಿ ನಿನ್ನ ಪಾದಕಮಲಕಭಿವಾದನಗೆಯ್ಯುವೆನಾಂ ||೫||

ಶ್ರೀ ವಿಶ್ವರೂಪರು ಭಾರತಿದೇವಿಗೆ ಊಟಣಿ ಮಾಡಿದ್ದು.

ವರಸತ್ಯಲೋಕವನು | ತೊರೆಯುತ ಮರ್ತ್ಯಕೆ ಬಂದು ||
ಗುರುವಿಷ್ಣು ಮಿತ್ರನಲುದಿಸಿದಿ | ವರವಿದ್ಯಾಸಿಂಧು ||೧||
ಬಂಧುಗಲಗ್ನಮುಹೂರ್ತ | ಆನಂದದೆನೀತೆಗೆಯುತಲಿ |
ಸುಂದರ ಪತ್ರಿಕೆ ಬರೆದಿಹ ಕರ ಠಾ ಗಂಧವ ಹಚ್ಚುವೆನು ||೨||
ಮೆಲ್ಲಡಿ ಹಂಸವನೇರಿ | ಒಲ್ಲದೆ ನೀಂ ಚರಿವುದಕೆ ||
ಚಲ್ವಗಂಗಳೆ ನಿನ್ನ ಗಲ್ಲಕೆ ಅರಿಷಿಣ ಹಚ್ಚುವೆ ನಾನು ||೩||
ಪಂಕಜಜಾತನ ಕಾಂತೆ | ಕಿಂಕರ ಭೂಸುರ ಪ್ರೀತೆ ||
ಪಂಕಜಮುಖಿ ನಿನ್ನ ಬಿಂಕದಪಣೆ ಠಾ ಕುಂಕುಮ ಹಚ್ಚುವೆನು ||೪||

ಲಗ್ನಸಮಾರಂಭಮುಗಿದು ಕಳುವೂಟವಾದ ಮೇಲೆ ವಿಷ್ಣುಮಿತ್ರನು ತನ್ನ ಮಗಳನ್ನು ಹಿಮಮಿತ್ರರಿಗೆ ಒಪ್ಪಿಸುವಾಗ, ಹಿಮಮಿತ್ರ ಮತ್ತು ಉಭಯಭಾರತಿ ಈರ್ವರಿಗೂ ಉಪದೇಶ ಮಾಡುತ್ತಾನೆ—

ಝಂಪಾ ರಾಗ ಬಾಗೇಶ್ರಿ ತಾಳ ಝಂಪೆ

ಕೇಳು ಹಿಮಮಿತ್ರ ನೀಂ | ತಾಳುವದು ತಾಳ್ಮೆಯನು ||
ಪೇಳ್ವೆ ಮತ್ಸುತೆಯ ಮಾ | ಯಾಳು ಸ್ವಭಾವವನು ||ಪಲ್ಲ||
ತನುಜಾತೆ ಭಾರತಿಯು | ವಿನಯಶಾಲಿಯು ತಾನು ॥
ಅನನುಭವಿಕಳು ಮನೆಯ ಕಾರ್ಯದೊಳಗೆ ||
ಜನಕನೊಲ್ ಪ್ರೇಮದಲಿ | ಅನವರತ ಪೊರೆಯೆಂದು |
ಮನಕೆ ಸಂತಸವ ಕೊಡು | ನಿನಗೊಪ್ಪಿಸಿದೆನಿವಳ ||೧||

ಉಭಯಭಾರತಿಗೆ ಉಪದೇಶಮಾಡಿದ್ದು:—

ಮಮಕನ್ಯೆ ಭಾರತಿಯೆ| ವಿಮಲಕನ್ಯಾವಸ್ಥೆ |ಯನು ಮೀರಿಗೃಹಿಣಿನಾಮಕ ದೆಸೆಯ ಪೊಂದಿರುವೆ ॥ ನಮಿಸಿ ಪತಿಚರಣವನು ಸಮೆದತಿಥಿ ಸೇವೆಯನು | ಹಿಮಮಿತ್ರ ಸೊಸೆಮೇಲ್ಮೆ ಪೊಂದುನೀಂ ಜಗದೆ ||೨||

ವೈದಿಕಧರ್ಮದ ಪುನರುಜ್ಜೀವನವು:—

(ಶ್ರೀ ಕುಮಾರಿಲಭಟ್ಟರ ಚರಿತ್ರ.) ರಾಗ—ಭೈರವಿ.

ಗದ್ಯ॥ ಭಾರತಭೂಮಿಯೊಳ್ ಕುಮಾರಿಲಭಟ್ಟ ಮಂಡನಮಿಶ್ರರೆಂಬುಭಯ ಧರ್ಮವೀರಪ್ರಾದುರ್ಭವಿಸುವದರೊಳ್ | ಬೌದ್ಧಧರ್ಮಂ ರಾಜಧರ್ಮಮಾಗಿ ಪರಿಣಮಿಸಲ್ ವೇದಬಾಹ್ಯರಾದ ಮನುಜರ್ ಪಾಪಕರ್ಮಂಗಳನ್ನಾಚರಿಸಿ | ವೇದಮೂರ್ತಿ

ಗಳ್ಗತಿತಾಪವನ್ನೀಯುತ್ತ ಮಿರುತಿರಲಾಪ್ರಸ್ತಾಪದೊಳ್ | ಆವುದಾದರೂ ಅತ್ಯಾಚಾರವಾದೊಡನೆಯೇ ಹತ್ಪ್ರಸಕ್ಕಾರಂಭವಾಗುವದೆಂಬ ಪಿರಿಯರ ಮಾತಿನೊಲ್ | ಕುಮಾರಿಲಭಟ್ಟರ್ ಪ್ರಸಿದ್ಧರಾಗಿ ವೈದಿಕ ಧರ್ಮಪ್ರತೀತಿಯಂಭೂಪತಿಗಳ ನಿದರ್ಶನಕೆ ತಂದುಕೊಡಲಾ ರಾಜರ್ಕಳೊಳ್ ಕಾಶ್ಮೀರಾಧಿಪನಾದ ಮಿಹಿರಕುಲನೆಂಬೋರ್ವಭೂಪಂ | ಗಾಂಧಾರದೇಶಕ್ಕೆ ದಂಡಯಾತ್ರೆಯ ಮಾಳ್ಪ ಸಮಯದೊಳ್ | ಮಾರ್ಗಸ್ಥಿತ ಬೌದ್ಧ ವಿಹಾರಂಗಳುಮಂ ಮೇಣ್‌ಸ್ತುಪಂಗಳುಮಂ ಭಸ್ಮೀಕರಿಸಿದಂ ಇನ್ನೋರ್ವ ಬಂಗಾಳಾಧಿಪನಾದ ಶಶಾಂಕಂ ಬೌದ್ಧಭಿಕ್ಷು, ಭಿಕ್ಷುಣಿಗಳಂ ಕೊಲಲಾಜ್ಞಾಪಿಸಿದಂ ಇದರಿಂ ತೃಪ್ತಿಪಡೆಯದೆ, ಬೋಧಿವೃಕ್ಷವನ್ನುತ್ಪಾಟನಂಗೆಯ್ದು, ಬುದ್ಧಪ್ರತಿಮೆಯ ಸ್ಥಳದೊಳ್ ಶಿವಲಿಂಗ ಪ್ರತಿಷ್ಠೆಯಂ ಮಾಡಿಸಿದಂ| ಇನ್ನೋರ್ವ ಪುಷ್ಪಮಿತ್ರನೆಂಬ ಆಶೋಕ ವಂಶಜನಾದ ರಾಜಂ, ಆರ್ ಬೌದ್ಧಭಿಕ್ಷುಗಳ ತಲೆಗಳಂ ತಂದೀಯುವರೋ, ಅವರ್ಗೆ ತಲೆಗೆ ನೂರು ದೀನಾರಂಗಳಂ ಪಾರಿತೋಷಕವೀವೆನೆಂದು ಘೋಷಿಸಿದಂ ಡಂಗುರವಂ, ಇನಿತರೊಳ್ ಕುಮಾರಿಲಭಟ್ಟರ್ ಬೌದ್ಧ ಧರ್ಮ ಮತವಂ ಖಂಡನಂ ಗೈಯುತ್ತ ಸಾರ್ವಭೌಮನಾದ ಸುಧನ್ವರಾಜನಾಸ್ಥಾನವಂ | ಸೇರಿ ರಾಜಕೃತ ಸನ್ಮಾನಂಗಳ ಸ್ವೀಕರಿಸಿ, ವಾದದೊಳ್ ಬೌದ್ಧಪಂಡಿತ ಪ್ರಮುಖರಂ ಸೋಲಿಸಿ ವೇದ ಮಹಿಮೆಯಂ ರಾಜನೆದುರೊಳ್ ವರ್ಣಿಸಿದನದೆಂತೆನೆ.

ಸಾಕಿ || ಖಂಡಿಸಿ ಭಾರತಮಂಡಲದೊಳ್‌ಗಡ | ಪಂಡಿತಭಟ್ಟರ್‌ಭರದೆ |
ಕಂಡಲ್ಲಿಯ ಬೌದ್ಧರವಾದದೆ ಶ್ರುತಿ| ಮಂಡಿಸಿದರ್ ನೃಪಸಭೆಯೊಳ್||೧||
ಮಾನ್ಯರೊಳಗೆ ಸನ್ಮಾನ್ಯನಾದ ಸು | ಧನ್ವರಾಜಸಭೆಯಲ್ಲಿ |
ಅನ್ಯಮತವ ಚನ್ನಾಗಿ ಪರಾಜಯ | ವನ್ನು ಮಾಡೆಯುಕ್ತಿಯಲಿ ||
ಇನ್ನುಂ ಸಂಶಯವು ಪೋಗದೆ ಶಾನುಳಿಯಲು ನಿಜವು ||೨||

ಸುಧನ್ವರಾಜನು ಅನ್ನುತ್ತಾನೆ:—

ಭಟ್ಟಪಾದರೇ ಬೆಟ್ಟದಿಂದ ಧಿಂ | ಕಿಟ್ಟುಸಾಯದಿಹ ನರನು |
ಅಟ್ಟಹಾಸದಿಂ ದಿಟ್ಟಮತವುತಾ | ನೆಟ್ಟಗೆಂದು ನಂಬುವೆನು ||೩||
ಇಟ್ಟನು ಪಣವನ್ನು | ಬೌದ್ಧರು ಮೆಟ್ಟಿಬಿದ್ದರಿನ್ನು ||೪||

ಭಟ್ಟಪಾದರು ಬೆಟ್ಟದಿಂದ ಹಾರಿದ್ದು:—

ವೇದವಸ್ಮರಿಸುತ ಮೋದದದೆ ಪರ್ವತ ! ವಾರೋಹಿಸುತಲ್ಲಿಂದ ||
ವೇದಪ್ರಮಾಣ ವಿರೋಡೆತಾ ಕೆ |ಡ ಕಾಗದು ದುಮುಕಿದರಿಂದ ||೪||

ಬೌದ್ಧ ಪಂಡಿತರು ಅಲ್ಲಗಳೆಯಲು ಸುಧನ್ವರಾಜನು ರೇಗಿಗೆದ್ದು |
ಉಭಯತರಿಗೂ ಒಂದು ಕಟ್ಟಪ್ಪಣೆ ಮಾಡಿದನು ||

ದಿಂಡಿ|| ಅಲ್ಲಗಳೆಯಲು ಬೌದ್ಧರನು ರಾಜನಾಗ | ಮೆಲ್ಲನೆ ಪ್ರಶ್ನೆಯನುಕೇಳ್ದಬೇಗ||
ಇಲ್ಲಿದಕುತ್ತರವ ಪೇಳದಲ್ಲಿ | ಕೊಲ್ಲಿಸುವೆನು ಕಲ್ಲುಗಾಣದಲ್ಲಿ ||೧||

ರಾಜನು ಕೊಡದಲ್ಲಿ ಹಾವುಹಾಕಿ ಏನಿದೆಯೆಂದು ಉಭಯತರನ್ನು ಕೇಳುತ್ತಾನೆ:—

ಚಾಮರವೃತ್ತ|| ಗುಪ್ತವಾಗಿ ಭುಜಗನಪ್ರಕ್ಷಿಪ್ತ ಕರಿಸಿ ಘಟದೊಳು |
ವಿಪ್ರರನ್ನು ಕೇಳೆ ಪೇಳ್ದರಲ್ಲಿ ಶೇಷಶಾಯಿಯು |
ಇರ್ಪನೆಂದು ಕ್ಷಿಪ್ರದಲ್ಲಿ ತೆರೆಯ ಘಟವರಾಜನು |
ಸರ್ಪವೆಂದು ನುಡಿದ ಬೌದ್ಧದರ್ಪವಿಳಿದು ಪೋದುದು||೧||

ಭಾಮಿನಿಷಟ್ಪದಿ|| ಈಪರಿಯೊಳಾ ಭೂಪತಿಲಕನು |
ಕೋಪಿಸುತ ಬೌದ್ಧರನು ಶೀಘ್ರದೆ |
ವ್ಯಾಪಿಸಿಪಾ ಸೇತುಹಿಮಗಿರಿ ತಟದ ಪರ್ಯಂತ||
ತಾಪವನ್ನೀಯುತ್ತ ಕೊಲಲಾ |
ಜ್ಞಾಪಿಸಿದ ನದನೇನು ಪೇಳಲಿ |
ಭೂಪನೀಕೃತಿ ಬೌದ್ಧಜನರಿಗೆ ಪ್ರಳಯದೋಲಾಯ್ತು || ೧||

ಪ್ರಯಾಗದಲ್ಲಿ ಕುಮಾರಿಲಭಟ್ಟರು ತುಷಾನಲಪ್ರವೇಶ ಮಾಳ್ಪೆವೆಂಬ ಪ್ರತಿಜ್ಞ ಮಾಡಿದ್ದು:—

ರಾಗ—ಕೇದಾರ

ಝಂಪಾ|| ಅಗಳಾನರಯಾಗವೇಗವ ನಿರೀಕ್ಷಿಸುತ |
ಭಾಗಿನಾನೀ ಕಾರ್ಯಭಾಗಪಾಪದ ಕೃತಿಗೆ ||
ಭಾಗೀರಥಿಯಮುನೆ ಸಂಗಮದೊಳಿರುವ ಪ್ರ |
ಯಾಗದೆತುಷಾನಲಪ್ರವೇಶ ಮಾಳ್ಪೆನು ಜವದಿ ||೧||



# ೨ನೆಯ ಭಾಗ.

ಶ್ರೀಮತ್ ಶಂಕರಾಚಾರ್ಯರ ಅವತಾರವು:—

ಸಾಕಿ|| ಕಾಲಟಿಯೊಳ್ ಕೈಲಾಸಾಧಿಪ ಫಾ|ಲಾಕ್ಷನು ಸುತರೂಪದೊಳು|
ಕಾಲಕೆ ಸರಿ ಧರ್ಮೋದ್ಧಾರಕ್ಕೆ ಸು | ಶೀಲೆತಾಯಿಯಂಬೆಯೊಳು ||
ಜನಿಸುತ ಘನಮಹಿಮಂ | ಜನನೀ ಜನಕರನುದ್ಧರಿಪಂ ||೧||

ತಂದೆಯಾದ ಶಿವಗುರುಗಳು ಆಚಾರ್ಯರ ಉಪನಯನ ಮಾಡಿ ಗುರುಕುಲಕ್ಕೆ ಕಳಿಸಿದ್ದು:—

ದಿಂಡಿ| ಐದು ವರುಷದೊಳುಪನೀತರಾದರಂದು |
ಮೋದದೆ ಗುರುಕುಲದೆ ವಾಸಗೈದು |
ವೇದಶಾಸ್ತ್ರೇತಿಹಾಸ ಸ್ಮೃತಿಗಳಲ್ಲಿ ||
ಆಯ್ದು ನಿಪುಣತೆ ಮೂರು ವರುಷದಲ್ಲಿ || ೨ ||

ಶ್ರೀಮದಾಚಾರ್ಯರ ಸನ್ಯಾಸಗ್ರಹಣ, ಗುರುಶುಶ್ರೂಷಾದಿ ವಿಷಯವು.—

ಪದ ರಾಗ—"ಭೀಮನು ಸರ್ವಜನ ಮೋಹಿಸುವಂಥ ಕಾಮಿನಿರೂಪವ ತೊಟ್ಟನು" ಇದರಂತೆ:—

ಶ್ರೀಶಿವಗುರುಸುತ ಶಂಕರಾರ್ಯರು |
ಭಾಸುರ ಸನ್ಯಾಸಾಶ್ರಮವಂ || ಪಲ್ಲ ||
ಸೋಸಿನಿಂದ ಸ್ವೀಕರಿಸಿ ನರ್ಮದಾ |
ವಾಸಿಯಾದ ಗೋವಿಂದನಾಥಸ ||
ನ್ಯಾಸಿತಪೋವನ| ವಾಶ್ರಯಿಸುತ|
ಲಾಸಕ್ತಿಯಿಂದ ಶುಶ್ರೂಷೆಗೈದರು || ಅನುಪಲ್ಲ ||
ನೇಮದೆ ಯತಿಗಳು ಕ್ರಮ ಸನ್ಯಾಸವನೀಯುತ |
ಆ ಮಹಾವಾಕ್ಯವನೊಂದೊಂದಕೊಂದು ಪೇಳುತ ||
ಸೋಮಧರನು ತಾನೀಮಹಿಗಿಳಿಯುತ ನಂದದೆ |
ಶ್ರೀಮತ್ಪರಮಹಂಸ ನಾಮವನು ಮೋದದೆ ||
ಚಾಲು || ಈ ಮಹಾಶಿಷ್ಯನು ಬ್ರಹ್ಮವಿದ್ಯೆಯೊಳ್ |
ತಾಮತಿ ಪ್ರಾಜ್ಞನೆನುತ್ತರಿತಾಗಳೆ |

ಭೂಮಿಯಲಿ ಸ್ವರ್ಧಾಮವೆನಿಪ ಕಾಶಿ |
ಗ್ರಾಮಕೆ ಪೋಗೆಂದು ಪೇಳ್ದರು ||೧||
ಜ್ಞಾನಶಾಸ್ತ್ರಕಾಧಾರವಾದುಪನಿಷತ್ತು |
ಬ್ರಹ್ಮಸೂತ್ರಮೇಣ್ ಗೀತೆಗೆ ಭಾಷ್ಯವನಿತ್ತು ||
ಆನಂದದಲದ್ವೈತಾರ್ಥವ ಪ್ರತಿಪಾದಿಸಿ |
ಜ್ಞಾನೋದಯವಪ್ಪಂತೆ ಪ್ರಚಾರವ ಮಾಡಿಸಿ||
ಚಾಲೂ || ನ್ಯೂನವಿಲ್ಲದೀಭಾಷ್ಯವನ್ನು ರಚ |
ನಾವಮಾಳ್ಪದಕೀತಾಣವು ಸರಿಯ |
ಲ್ಲಾ ನಾರಾಯಣನಿರುತಿಹ ಬದರಿಗೆ |
ಜ್ಞಾನನಿಧಿಗಳಾತುರದೆ ಪೋದರು ||೨||
ಅಲ್ಲಿರುತಂ ರಚಿಸಿದರ್ಭ ಭಾಷ್ಯವ ಸತ್ವರ |
ಮೆಲ್ಲನೆ ಮನದೊಳ್ ತಂದರು ದರ್ಶನ ಭಟ್ಟರ |
ಎಲ್ಲವರೊಳ್ ಮೊದಲಾಗಿ ಮೇಲ್ಮೆವಡೆದಿರ್ದರ |
ಸಲ್ಲಲಿತಾಚಾರದ ಸ್ಥಾಪನೆಯನು ಮಾಳ್ಪರ||
ಚಾಲೂ || ಬಲ್ಲಿದರನು ತಾನೆಲ್ಲಿ ಕಾಣಲು |
ಬಲ್ಲೆವೆಂದು ನೆನೆಯುತ್ತ ಬಂದರ್ಪ |
ಅಲ್ಲಾ ಬಾದದೊಳೆಲ್ಲಿ ತುಷಾಗ್ನಿ |
ಯಲ್ಲಿ ಕುಳಿತ ಕುಮಾರಿಲರೆದುರೊಳ್ || ೩ ||

ಕುಮಾರಿಲಭಟ್ಟರ ತುಷಾನಲ ಪ್ರವೇಶವು:—

ರಾಗ— ಕೇದಾರ. ತಾಳ:—ಝಂಪೆ.

ಭಟ್ಟಪಾದರು ತಾವು | ಅಟ್ಟಹಾಸದೆ ಶಾಸ್ತ್ರ |
ಬಿಟ್ಟಸುತ್ತನಲಪ್ರವಿಷ್ಟ ಮಾಡಿಸಿ ಕುಳಿತು ||
ಶಿಷ್ಟತನದಲ್ಲಿರಲು| ಶ್ರೇಷ್ಠ ಶಂಕರ ಪರಿ|
ವ್ರಾಟ್ಟರಲ್ಲಿಗೆ ಬಂದು ಬೆಟ್ಟಿಯಾದರ್ ತ್ವರದೆ ||೧||
ಶಾಸ್ತ್ರಿಕದೆ ರಚಿಸಿರ್ಪ | ಸೂತ್ರಭಾಷ್ಯಕೆ ನಾನು |
ವಾರ್ತಿಕವ ಬರಸಿಕೊಳಲಾತುರದೆ ಬಂದಿಹೆನು ||
ಧಾತ್ರಿಯೊಳು ಶ್ರೇಷ್ಠ ಮಾಹಿಷ್ಮತೀವಾಸಿಪ್ರ|
ಖ್ಯಾತಮಂಡನ ಸಿಷ್ಣಾತರಿಂ ಬರೆಯಿಸಿರಿ ||೨||

ಮಂಡನಾಭಿಧಾನ | ಪಂಡಿತರು ಷಟ್ಕರ್ಮ |
ಮಂಡನದೆ ಶಕ್ತನುಸಿಖಂಡಿಸಿಹರವರ ಮನ ||
ಅಂಡಲೆದೊಡಂಬಡಿಸಿಘುವರಿಂದಲೀಸೂತ್ರ |
ಖಂಡಕ್ಕೆ ವಾರ್ತಿಕವ ಮಂಡಿಸಿರಿ ನೀವೀಗ ||೩||

ಶ್ರೀಶಂಕರ ಭಗವತ್ಪಾದರು ಕುಮಾರಿಲಭಟ್ಟರ ಆಜ್ಞೆಯಂತೆ ಮಾಹಿಷ್ಮತಿಗೆ ಬಂದು, ಮಂಡನಮಿಶ್ರರ ಗೃಹವನ್ನು ಕಂಡುಹಿಡಿಯಲ್ಕೆ ನರ್ಮದೆಯ ನೀರಿಗೆ ಬಂದ ಅವರ ದಾಸಿಯರನ್ನು ಕುರಿತು ಪ್ರಶ್ನೆಮಾಡುತ್ತಾರೆ:—

ಸಾಕಿ|| ಶಂಕರ ಗುರುಗಳು ಮಾಹಿಷ್ಮತಿಯೊಳ್ |ಶಂಕಿತರಾಗುತ್ತಿನ್ನು ||
ಬಿಂಕದ ದಾಸಿಯರನು ಕರ್ಮಠಬಿರು |ದಾಂಕಿತರ ಗೃಹವನ್ನು || ೧ ||
ಚನ್ನಿಗದಾಸಿಯರಿನ್ನಿದಕುತ್ತರ | ವನ್ನಿತ್ತರು ಪ್ರಸಿದ್ಧಂ ||
ಅನ್ಯಪ್ರಮಾಣವಿಲ್ಲದೆ ವೇದವು | ತನ್ನಿಂತಾನೇಸಿದ್ಧಂ || ೨ ||
ಪೆಣ್ಗಿಳಿಗಳ್ ಬಹು ಜಾಣ್ಮೆಯಿಂದ ಪ್ರಾ|ಮಾಣ್ಯವಿಷಯ ವಾದವನು|
ಕಣ್ಣಿನ ಸೋಲಿಸತೆರ ಮಂಡನಗೃಹ|ವನ್ನು ತಿಳಿಯೊ ಗುರು ನೀನು ||೩||

ಮತ್ತು

ಕರ್ಮವು ತಾಸುಖದುಃಖಗಳ ಫಲ |ಮರ್ಮವನೀಯುವದೋ ಮೇಣ್ |
ನಿರ್ಮಲಮೂರ್ತಿ ಪರೇಶನೀವನೊ| ಧಾರ್ಮಿಕಕೀರಾಂಗನೆಯರ್ |
ಎನ್ನುತ ವಾದವನು | ಮಾಡುವ ಸನ್ನುತ ಗೃಹವಿನ್ನು || ೪ ||

ಇದಲ್ಲದೆ

ದಿಟ್ಟಿಗೆ ಸೊಗಯಿಪ ಸೃಷ್ಟಿಯು ಸತ್ಯವೊ |ಸ್ಪಷ್ಟದೆ ಮಿಥ್ಯವೊ ಎಂದುಂ|
ಅಟ್ಟಾಲಕ ನೀಡಸ್ಥಿತಕೆಂಗಣ್ವಕ್ಕಿ ಮಾಳ್ಪವಾದವನು ||
ಮನೆಯದು ಪಂಡಿತರ |ಘನ ಮಹಿಮರೇ ಸತ್ವರ || ೫ ||

ಶಂಕರಾಚಾರ್ಯರು ಮಂಡನಮಿಶ್ರರ ಮನೆಯ ಮುಂದೆ ಬಂದು ಒಳಅಗಳಿ ಹಾಕಿದ ಬಾಗಿಲ ನೋಡಿ, ಯೋಗಬಲದಿಂದ ಒಳಗೆ ಪ್ರವೇಶ ಮಾಡಿದ್ದು:—

ವೃತ್ತಂ|| ಅರ್ಗಲದಿಂ ಭದ್ರಗೆಯ್ದ ಬಾಗಿಲವ ನಿರೀಕ್ಷಿಸಿ |
ಯೋಗಬಲದಿಯಂಗಣದೊಳ್ ವೇಗದಿಂ ಪ್ರವೇಶಿಸಿ ||
ಆಗಮಂಡನರ್ "ಕುತೋಮುಂಡಿ" ಎಂದು ಕೇಳ್ವುದ|
"ಕ್ಯಾಗಲಾತ್"ಯೆಂದು ಗುರುವು ವೇಗದಿಂದುಸುರ್ದದ ||೧||

ಶ್ರಾದ್ಧಕ್ಕೆಕುಳಿತ ಜೈಮಿನಿ-ವ್ಯಾಸರು ಶ್ರೀಶಂಕರಾಚಾರ್ಯರನ್ನು ವಿಷ್ಣು ಸ್ಥಳಕ್ಕೆ ಕೂಡ್ರಿಸೆಂದು ಹೇಳಿದ್ದು:—

ಭಾ. ಷ. || ಅಂದುತಂದೆಯ ಶ್ರಾದ್ಧತಿಥಿ ತಾ |
ನೆಂದು ಜೈಮಿನಿ, ವ್ಯಾಸರೆಂಬ ಮು |
ನೀಂದ್ರರನು ಕುಳ್ಳಿರಿಸೆ ವಿಶ್ವೇದೇವ, ಪಿತೃಸ್ಥಳಕೆ ||
ಮುಂದೆ ಬಂದಿಹ ಸಂಯಮೀಂದ್ರರ |
ಕಂದೆರದು ನೋಡುತ್ತ ಮುನಿಗಳು |
ಅಂದರೈ ಗೋವಿಂದಸ್ಥಾನಕೆ ಯತಿಯಕೂಡ್ರಿಸು ನೀಂ ||೧||

ಇದಕ್ಕೆ ಮಂಡನಮಿಶ್ರರು ಹೀಗೆ ಅನ್ನುತ್ತಾರೆ:—

ಈ ಕ್ಷಣದೆ ಪಿತೃಶ್ರಾದ್ಧಕಾಲ ನಿ |
ರೀಕ್ಷಿಣಂಗಡತಾವು ಬಪ್ಪುದು |
ಭಿಕ್ಷೆಗೆಂದುಸರಿದರು ಮಂಡನರಾ ವಿನಂತಿಯನು ||
ತಕ್ಷಣದೆ ಮನ್ನಿಸುತ ಯತಿಗಳು |
ಪಕ್ಷಿಗಮನಸ್ಥಾನವನ್ನನು |
ಲಕ್ಷಿಸುವೆನಾಂ ವಾದಭಿಕ್ಷೆಯ ನೀಯಬೇಕು ಕಣಾ ||೨||

ಶ್ರಾದ್ಧವಾದಮೇಲೆ ಶಂಕರ-ಮಂಡನರ ವಾದದ ಪ್ರಸ್ತಾಪ ಹೊರಡಲು ವಾದ ನಿರ್ಣಯಕೋಸ್ಕರ ಅಧ್ಯಕ್ಷರನ್ನು ಆರಿಸುವಿಕೆ:—

ಸಾಕಿ|| ವಾದವುಭಯರೊಳ್ ಪ್ರಾದುರ್ಭವಿಸಲು, ಮೋದದೆ ಮಂಡನರಂದು||
ವಾದನಿರ್ಣಯವ ಮಾಳ್ಪದಕಾಬುಧ| ರಾಜವ್ಯಾಸ ಜೈಮಿನಿಗೆ|
ಬಿನ್ನಹಮಾಡುತಲಿ| ಮನ್ನಣೆಭಾರತಿಗೀಯುತಲಿ ||೩||

ಆಗ ವ್ಯಾಸ-ಜೈಮಿನಿಗಳು ಅನ್ನುತ್ತಾರೆ:—

ನಿಖಿಲ ಶಾಸ್ತ್ರಪಾರಂಗತಳಾಗಿಹ| ಪ್ರಖರತೇಜ ಭಾರತಿಯು|
ಅಖಿಲವಾದ ನಿರ್ಣಯವಂಗೆಯ್ವಳ್|ಪ್ರಕಟಿಸುವದು ಪಿರಿತನಕೆ ||೪||

ಸಭೆಯವರ್ಣನೆ:—

ಚಾಮರ ವೃತ್ತಂ|| ಮಂಡನಾಖ್ಯ ಪಂಡಿತರ್ ಪ್ರಚಂಡಸಭೆಯಮಾಡಲು |
ದಂಡಿವರ್ಯ ಶಂಕರಾಖ್ಯ ದಂಡಿಬಂದು ಕುಳ್ಳಿರಲ್ ||
ಮಂಡಲದೊಳ್ ಸಕಲಶಾಸ್ತ್ರಶೌಂಡಳಾದ ಭಾರತಿ |
ಖಂಡಿತಾಧ್ಯಕ್ಷತಾಣ ಮಂಡಿಸಿದಳ್ ಮೋದದಿ ||೫||

ಮೊದಲು ಶ್ರೀಮತ್ ಶಂಕರಾಚಾರ್ಯರು ಪ್ರತಿಜ್ಞೆ ಮಾಡುತ್ತಾರೆ:—

ಝಂಪಾ॥ ಸಚ್ಚಿದಾನಂದಮಯಬ್ರಹ್ಮನೋರ್ವನೆ ಸತ್ಯ।
ಇಚ್ಛಿತಜ್ಞಾನಮಯಮಾಗಿ ತೋರ್ಪೀಜಗತ್।
ಮಿಥ್ಯವಿದೆ ಬ್ರಹ್ಮಜ್ಞಾನವ ಪೊಂದಲಾಗಲಾ।
ಸ್ವಚ್ಛತ್ವದಿಂ ಮೋಕ್ಷವಿಚ್ಛಿಸದೆ ಬಪ್ಪುದೈ ॥೧॥
ನಿಚ್ಚಳದೆ ಪೇಳ್ವೆ ನಾನೀವಾದದೊಳ್ ಸೋತ।
ರಿಚ್ಛೆಯಲಿ ಕಾಷಾಯವಸ್ತ್ರತ್ಯಜಿಸುವೆನು ॥೨॥

ಮಂಡನರ ಪ್ರತಿಜ್ಞೆ:—

"ಅಧಮ ಕಿತಿಪಾಲಕಾ ಅಸಸಿ ಭೂಪಾ" ಎಂಬಂತೆ

ಝಂಪಾ॥ ಮಂಡಲದೊಳೀ ಕರ್ಮಕಾಂಡವೇ ಮುಖ್ಯವೈ।
ದಂಡಿಯಾಗುವದಿದು ಅಖಂಡ ತಪ್ಪು॥
ಮಂಡನವ ಮಾಡಿರ್ಪ ಕರ್ಮದಿಂ ಮೋಕ್ಷವೈ।
ಖಂಡಿತವಿದೆಲ್ಲ ಸಜ್ಜನರ ಒಪ್ಪು ॥೧॥
ಇನ್ನು ನಾನೀ ವಾದದಿಂದ ಪರಿಭವಿಸಲೀ।
ಮುನ್ನಣೆಯ ಗಾರ್ಹಸ್ಥ್ಯಧರ್ಮವನ್ನು॥
ನನ್ನಿಯಿಂ ತ್ಯಜಿಸುತ್ತ ಸನ್ಯಾಸವಂಗ್ರಹಿಸಿ।
ಸನ್ನುತ ಚಿದಾನಂದ ಬ್ರಹ್ಮನಾಗುವೆನು ॥೨॥



ಸಾಕಿ॥ ಭಾರತಿದೇವಿಯು ಮಾಡುತ್ತಿಹ ಗೃಹ।ಕಾರ್ಯದ ಕಾರಣದಿಂದ॥
ಹಾರವ ಹಾಕಿದಳೀರ್ವರ ಕಂಠದೆ। ಆರಮಾಲೆ ಬಾಡುವದೋ॥
ಮೊದಲೊಳು ಸೋತರವರ್। ನಿರ್ಣಯ ಕೇಳ್ವುದು ನೀವೀರ್ವರ್॥೩॥

ದಿಂಡಿ॥ ಪ್ರತಿದಿನದೊಳ್ ಸ್ನಾನಾಹ್ನಿಕಮಾಡಿ।
ಅತಿಸಾತ್ವಿಕ ವಾದವನ್ನು ಹೂಡಿ॥
ಪತಿ, ಯತಿ, ಭೋಜನಕೆ, ಭಿಕ್ಷೆಗೆಂದು।
ಮತಿಯುತೆ ಕ್ರಮದಿಂದ ಕರೆವಳೆಂದು ॥೪॥

ವಾದದ ರೀತಿ:—

ರಾಗ—ಭೈರವಿ.

ಗದ್ಯ॥ ಈರ್ವರ್ ಪದ್ಮಾಸನದೊಳಿದುರಾಗಿಕುಳ್ಳಿರ್ದು, ಪೂರ್ವೋತ್ತರಪಕ್ಷ ಮಂಡನಂಗೆಯ್ದು ಮಧ್ಯಾನ್ನಸಮಯಮಾಗಲಾಭಾರತೀದೇವಿಯಿಂ ವಿರಚಿತಮಪ್ಪ

ವಾಕವುಂಭೋಜನಂಗೆಯ್ದು, ಸೂರ್ಯಾಸ್ತಕೆ ಪತ್ತುಗಳಿಗೆ ಇರ್ಪಾಗಲೆ ಮತ್ತೆವಾದಾರಂಭಂಗೆಯುತ್ತಿರ್ದರ್,ವಾದಂ ಸಾಧುವಾಗಿ ಪರಿಣಮಿಸುತ್ತಿರ್ದದರಿಂದಾರಮುಖಕಮಲಂಗಳ್ ಬೆಮರೊಡೆಯದೆ ಪ್ರಫುಲ್ಲಿತಮಾಗಿರ್ಪವೆಂದುಂ, ಪ್ರಶ್ನಕ್ಕುತ್ತರಂಗುಡಲಾರದಾರಾದರ್ ತೂಷ್ಣೀಭಾವಂಗೆಯ್ಯರ್, ಉತ್ತರಂ ಕುಡಲಾರದವರ್ ಕೋಪಮಂ ನಟಿಸರ್, ಈ ತೆರದಿಂ ಶ್ರುತಿವಚನಂಗಳಂ ಪ್ರಮಾಣೀಕರಿಸಿ ವಾದನಡೆಯುತ್ತಿರ್ಪನ್ನೆಗಂ, ಶ್ರೀ ಬ್ರಹ್ಮದೇವನೇ ಮೊದಲಾದ್ಯಖಿಳ ದೇವರ್ಕಳ್ ವಿಮಾನಾರೂಢರಾಗಿಯಾಗಸದೊಳ್ ನಿಂತು ನಿರೀಕ್ಷಿಸುತ್ತಿರ್ದರದನೇಂಬಣ್ಣಿಪೇನದಂ ಬಣ್ಣಿಸುವಡೆನ್ನಪವಣಲ್ತಾದೊಡೆ "ಸ್ಥಾಲೀ ಪುಲಾಕನ್ಯಾಯದಿಂ" ಬಲ್ಲನಿತಂ ಪೇಳ್ವೆನಂದೆಂತೆನೆ—

## ವಾದದ ವಿಷಯ:—

"ಮನಮೋಹನ ರೂಪವನೋಡಿ ಮನದೊಳುಭ್ರಾಂತಳಾದೆನೆ" ಎಂಬ ಪದದಂತೆ

ಆಚಾರ್ಯರು:—

ಪ್ರತಿಪಾದಿಸುವೆನು ಅತಿಚತುರತೆಯಿಂ ಜೀವೇಶ್ವರೈಕ್ಯದ||ಪಲ್ಲ||

ಮಂಡನರು:—

ಯತಿರಾಜರೆ ಜೀವೇಶ್ವರರೈಕ್ಯ ಪ್ರತಿಪಾದನೆಗೆ ಪ್ರಮಾಣವದೇಂ?||

ಆಚಾರ್ಯರು:—

ಮತಿಯುತರುದ್ದಾಲಕ ಜನಕರ್ವರಶ್ವೇತುಕೇತುವಂ ಐಕ್ಯವಬೋಧಿಸಿರ್ಪರು||೧||

ಮಂಡನರು:—

ಉತ್ತರಭಾಗದ "ತತ್ವಮಸಿ"ಯು ಮಂತ್ರೋತ್ಕರದಂತೆ ಜಪಾರ್ಥಕದಲ್? ||

ಆಚಾರ್ಯರು:—

ತತ್ವಮಸಿಯು ಮಥಿತಾರ್ಥವು ಸ್ಪಷ್ಟ ಜಪಾರ್ಥಕಾನಲ್ಲಂ|| ||೨||

ಮಂಡನರು:—

ತತ್ವಮಸೀವಾಕ್ಯದೊಳೈಕ್ಯವು ತಾ | ನಸತ್ಯದಲ್ ಜೀವೇಶ್ವರರ? ||

ಆಚಾರ್ಯರು:—

ತತ್ವಮಸಿಗೆ ವಿಧ್ಯರ್ಥವು ಉತ್ತಮ ಅರ್ಥವಲ್ಲವು || ೩||

ಮಂಡನರು:—

ಪರಮಾತ್ಮಂಗೆಯು ಜೀವಾತ್ಮಂಗೆಯು ನೆರೆಸಾಮ್ಯವು ತಾನಿರುತಿಹುದೈ?||

ಆಚಾರ್ಯರು:—

ಸರ್ವಾತ್ಮತ್ವ, ಸರ್ವಜ್ಞತ್ವದೆ ಬಾಧೆ ಬರುತಿಹುದೈ | ಐಕ್ಯಕೆ ||೪||

ಮಂಡನರು:—

ಮಾಯೆಯಲೀಗುಣವಾಯುತವಾಗಿರೆ ಸಾಮ್ಯತೆ ಪೇಳ್ದರೆದೋಷಮದೇಂ?||

ಆಚಾರ್ಯರು:—

ಮಾಯೆಯಲೀ ಭಿನ್ನತೆ ಜನಿಸುವದೆಂದಂದಿರಲ್ಲವೆ ಐಕ್ಯಕೆ ಸಮ್ಮತಿಲ್ಲವೆ ||೫||

ಮಂಡನರು:—

ಈಶ್ವರತಾನಲ್ಲೆಂಬುಕ್ತಿಯು ಜೀವೇಶ್ವರರೈಕ್ಯಕೆ ವಿರೋಧವು ||

ಆಚಾರ್ಯರು:—

ಈಶ್ವರಗೋಚರನಿಲ್ಲವಿಂದ್ರಿಯಕೆ ಎಂತು ಸಾಧಕವು | ಪೇಳಿರೀ ||

ಮಂಡನರು:—

ಇಂದ್ರಿಯಗಳಿಗೆ ಅಗೋಚರವೈಕ್ಯವು ಬಂದುದಿಲ್ಲ ಸಾಕ್ಷಿಸ್ವರೂಪ ||೬||

ಆಚಾರ್ಯರು:—

ಸಂದಿಹಸಾಕ್ಷಿ, ಪ್ರತ್ಯಕ್ಷಶ್ರುತಿಯಿಂದಭಿನ್ನವು| ಆದುದರಿಂದಲೈಕ್ಯವು ||೭||
ಈ ತೆರದೊಳ್ ಪ್ರತಿಪಾದಿಸಿರ್ಪಮತಸತ್ಯವೆಂದು ತಾನೊಪ್ಪಲು |
ಪತಿಕೊರಳೊಳಗಿಹ ಪೂಮಾಲೆಯು ಗಡ ತಾನೆ ಬಾಡಲು ||೮||
ಪತಿಯು ಪರಾಜಯ ಪೊಂದಲು ಭಾರತಿ ಯತಿಯಾಶ್ರಮ ಬಂತೆನ್ನುತಲಿ||
ಪತಿಯತಿಗಳಿಗಾಸತಿ ನೀವ್‌ಭಿಕ್ಷೆಗೆ ಬನ್ನಿರೆಂದಳು ||೯||

ಭಾರತಿ ಅನ್ನುತ್ತಾಳೆ:—

ದಿಂಡಿ|| ಪತಿಸೋಲಲು ಕರೆದು ಯತಿಗಳನ್ನು |
ಹಿತದಿಂದೆನ್ನೊಡನೆ ವಾದವನ್ನು ||
ಮತಿಯುತೆ ಭಾರತಿಯು ಪೇಳ್ದಳಂದು|
ಸತಿತಾಪತಿಯರ್ಧಶರೀರವೆಂದು ||೧||

ಆಚಾರ್ಯರು ಅನ್ನುತ್ತಾರೆ:—

ಸಾಕಿ|| ಪ್ರಾಜ್ಞಪುರುಷರ ಬಲಾಜನರೊಡನೆಯು| ಓಜೆಗೆ ಬಾರದುವಾದಂ |
ಭಾರತಿ|| ಯಾಜ್ಞವಲ್ಕ್ಯ ಜನಕಾದಿಗಳಬ|ಳಾಗಾರ್ಗಿಸುಲಭೆಯಲಿವಾದಂ|
ಮಾಡಲು ಯಶವಡು ತಾ|ದೊಡುವದಿದು ಕೇಳಿರಿ ಮಿಥ್ಯಾ||೨||

ಆಚಾರ್ಯರು:—

ಚಾಮರವೃತ್ತಂ|| ಅಂದಮಾತಿಗೊಪ್ಪಿಸಂಯಮೀಂದ್ರರಂದು ವಾದವಂ|
ಇಂದುವದನೆ ಭಾರತಿಗೆಯ್ದೊಂದು ಮೇಲು ಯುಕ್ತಿಯಂ ||
ಕಂದರ್ಪನ ಕಲೆಗಳೆನಿತು? ಲಕ್ಷಣವೇಂ? ತಾಣವಂ|
ಸಂದಶುಕ್ಲಪಕ್ಷದೊಳ್ ಯತೀಂದ್ರರೈಸೆ ಪೇಳ್ವುದು ||೩||

ಒಂದುತಿಂಗಳವಧಿಯನ್ನು ಕೊಂಡು ಯತಿವರೇಣ್ಯರು |
ಸಂದುಗುಹೆಯೊಳಿಟ್ಟು ದೇಹವೊಂದಿ ರಾಜಕಾಯವಂ ||
ಸುಂದರಿಯರ್ ನೂರುಮಂದಿ ಪೆಂಡಿರಿಂದ ಮನ್ಮಥ|
ಬಂಧುರಶಾಸ್ತ್ರವನು ಕಲಿತು ಬಂದ ತೆರವ ಪೇಳುವೆಂ ||೪||

---

# ೩ನೆಯ ಭಾಗ.



ಶಂಕರಭಗವತ್ಪಾದಾಚಾರ್ಯರು ಪರಕಾಯ ಪ್ರವೇಶ ಮಾಡಿ ಕಾಮಶಾಸ್ತ್ರ
ಕಲಿತು ಬರುವೆನೆಂದು ಹೇಳಿದ್ದಕ್ಕೆ ಶ್ರೀಪದ್ಮಪಾದಾಚಾರ್ಯರು
ವಿನಂತಿ ಮಾಡಿಕೊಂಡದ್ದು:—

ಸಾಕಿ|| ಹಿಂದಕೆ ವರಮತ್ಸೇಂದ್ರನಾಥ ಯೋ|ಗೀಂದ್ರರು ತಿಲೋತ್ತಮೆಯನು|
ಹೊಂದಿ ಮರೆತರೈ ರಾಜಭೋಗ ಸುಖದಿಂದ ನಾಥಪಂಥವನು ||೧||
ಮುಂದೆ ದೀರ್ಘಕಾಲಂಗತಿಸಲು ಗುರು|ಬಂದು ಸೇರದಿರಲಿನ್ನು |
ಅಂದು ಗೋರಖಮೃದಂಗದೆ ವಾದನ | ದಿಂದ ನೃಪನಮನವನ್ನು |
ತಿರುಗಿಸು ತಾ ಗುರುವಂ | ತಂದನು ವರಪೂರ್ವ ಸ್ಥಿತಿಗಂ ||

ಆಚಾರ್ಯರು ಪದ್ಮಪಾದರಿಗೆ ಸಮಾಧಾನ ಹೇಳಿದ್ದು:—
ಮತ್ತೇಭವಿಕ್ರೀಡಿತ ವೃತ್ತ—

ಸುರಪಾಲಂಗಡಕೊಂದು ಸಂಯಮಿ, ತ್ರಿಶೀರ್ಷಂ ನಾಮ ಮನುಜರ್ಕಳಂ|
ಶರಿಸಂದಂದು ವೃಕಾಳಿಗಳ್ಗಶನಮಂ ಮುನ್ನಿತ್ತನಾತಂಗೆರೋ ॥
ಮರವಂ ನಷ್ಟಮುಮಿಲ್ಲವೆಂದುಸುರ್ದುದಾ ಋಗ್ವೇದ ಸೂತ್ರಂ ಕೇಣಾ|
ಪರಮೋಕ್ಷಂದೊರೆದತ್ತು ಯಜ್ಞಬಹುಲಂ ತಾಂಗೆಯ್ದು ಜನಕಂಗೆಯುಂ ||೩||

ಶ್ರೀಮದಾಚಾರ್ಯರು ಅಮರುಕರಾಜನ ಶರೀರಪ್ರವೇಶ ಮಾಡಿದ್ದು,
"ವಿತಾತ್ರ ಮಮ ಜನ್ಮಕಥಾ ಪುಸಲಿ ಕಾ ತಿನೆ"
ಎಂಬ ಶಾಪಸಂಭ್ರಮನಾಟಕದೊಳಗಣ ಪದದಂತೆ—

ಪದ—ರಾಗ—ಕಾಪಿ. ತಾಳ—ಬಿಲಂದಿ.

ಯತಿಶರೀರತ್ಯಜಿಸಿಯಮರುನೃಪತಿ ಕಾಯದೆ|
ಅತಿತ್ವರದೊಳ್ ಪೊಗುವೆ ನಾನು ಯೋಗಬಲದಲಿ ||ಪಲ್ಲ||

ಇತ್ತ ರಾಜದೇಹ ಚೇತನದೊಳೆದ್ದಿತು |
ಅತ್ತ ಯತಿಶರೀರ ನಿಶ್ಚೇತನವಾಯ್ತು ||
ಮತ್ತೆರಾಜಪತ್ನಿಯರಿಗೆ ಮೋದವಾಯಿತು |
ಸತ್ತ ಮನುಜನೇಳೆ ಪರಮ ಸಂತಸವಾಯ್ತು ||೧||

ಅಮರುಕನಿಗೆ ಅಮರರಮಣಿಸಮರುನೂರ್ವರು |
ರಮಣಿಯರಿರೆ ಕಾಮಶಾಸ್ತ್ರಕ್ರಮವ ಕಲಿತರು ||
ಭ್ರಮದರಾಜಭೋಗದೆ ತನುಸ್ಮರಣೆ ಮರೆತರು |
ಅಮಮಕು ಸುಮಶರನ ಕರಣೆಯೆನಿತು ಕಡುತರಂ || ||೨||
ಮುನ್ನಿನನೃಪಕರಣದಿಂದ| ಭಿನ್ನವಾಗಿರೆ ಮೋಹ್ |
ಚನ್ನವಾಗಿ ತೋರಲಿವರು ಅನ್ಯ ಮನುಜರೆಂ |
ದುನ್ನತ ಸಂತಸದೆ ಜೀವ | ವಿನ್ನು ಮರಳದೊಲ್ |
ಮುನ್ನವೆ ನೀವ್ ಮನುಜ ಶವಗ|ಳನ್ನು ದಹಿಪುದು ||೩||
ಎನಲು ರಾಜದೂತರಾಗ ಮನುಜ ಶವಗಳಂ |
ಜನ ಪದದೊಳ್ ದಹಿಸುತರಸುತಾಗ ಗುಹೆಗಳಂ ||೪||

ಪದ್ಮಪಾದರು ಸಂಗೀತಗಾರರವೇಷಧರಿಸಿ ಅಮರುಕರಾಜನ ಸಭೆಗೆ ಹೋದದ್ದು:—

ಭಾಮಿನಿ ಷ. ಅರೆನಿಮಿಷವಗಲದಲೆ ಕಾಯು |
ತ್ತಿರುವ ಛಾತ್ರರು ಯತಿಕಲೇವರ|
ವೆರಡು ತಿಂಗಳ ಮೇಲೆ ಕಳೆಯಲು ದಿನಗಳಾರು ಕಣಾ ||
ಬರದಿರಲು ಗುರು ಪೂರ್ವಸ್ಮರಣೆಯ |
ಮರೆತರೆನ್ನುತ ಪದ್ಮಪಾದಾ |
ದ್ಯರು ಧರಿಸಿ ಸಂಗೀತಕಾರರ ವೇಷವಹಿಲದಲಿ ||೫||
ಪದ್ಮಪಾದರು ಛದ್ಮವೇಷದಿ |
ವಿದ್ಯಮಾನ ನೃಪಾಲನೆನಿಸುವ |
ಆದ್ಯಗುರು ಶ್ರೀಶಂಕರಾಚಾರ್ಯಾಖ್ಯಯತಿವರರ ||
ಸದ್ಯದೊಳ್ ಪೂರ್ವಸ್ಮರಣೆಯಾ |
ವಿದ್ಧವಾಗುವ ತೆರದಿ ನೂತನ |
ಪದ್ಯರಚಿಸುತ ಪಾಡಲಾ ಗುರುವೆದ್ದುಪೋದಕಣಾ ||೬||
ವಹಿಲದಲಿ ಗುರುಪೂರ್ವದೊಳ್ ಗಿರಿ |
ಗುಹೆಯೊಳಿರಿಸಿದ ತನುವ ದೂತರು |
ದಹಿಸಲೋಸುಗವಹ್ನಿಸಂಪರ್ಕವನು ಮಾಡಿರಲು ||
ಮಹಿಮೆಯುತ ಲಕ್ಷ್ಮೀನೃಸಿಂಹನ|
ಮಹಿಮೆಯನು ಗುರುಪೊಗಳೆ ವಿಷ್ಣುವು |
ಮಹಿತ ಪ್ರೇಮದೊಳುರಿಯ ನಂದಿಸಿ ಪೊರೆದ ಗುರುತನವ ||೭||

ದ್ವಿಪದೆ॥ತ್ವರದಿಂದಲಿ ಮಾಹಿಷ್ಮತಿಪುರಕೆ ಬರಲಿನ್ನು ।
ವರಭಾರತಿಯೊಪ್ಪೆ ಗುರುಸರ್ವಜ್ಞತೆಯನ್ನು ॥೮॥

ಶ್ರೀಮತ್‌ಶಂಕರಾಚಾರ್ಯರು ಉಭಯಭಾರತಿಯನ್ನು ಕುರಿತು ಪ್ರಾರ್ಥಿಸಿದ್ದು:—

ಪದ—ರಾಗ ಸಾರಂಗ ತಾಳ—ಜಿಲಂದಿ

"ಜಾಣೆನೋಡುನು ನಡಿ ವೇಣುಗೋಪಾಲನ" ಎಂಬಂತೆ

ಉಭಯಭಾರತಿಯೆನಗಭಯವ ನೀಡೆ ।
ಪ್ರಭೆಯಿಂದ ಜಗದ ಕಲ್ಯಾಣವಮಾಡೆ॥ ॥ಪಲ್ಲ॥
ವರಋಷ್ಯಶೃಂಗಕ್ಷೇತ್ರದೊಳು ಸ್ಥಾಪಿಸುವ ।
ಗುರುಪೀಠದಲ್ಲಿ ಶಾರದೆ ನಾಮದಿರುತ ॥
ಉರುಪೂಜೆಯನ್ನು ಸ್ವೀಕರಿಸುತ ಸಕಲ ।
ಪುರುಷಾರ್ಥವೀವಂತೆ ವರವನ್ನು ಕೊಡುತ ॥೧॥
ಆಗಶಾರದೆ "ಹಾಗೆ ಆಗಲಿ"ಂತೆಂದು ।
ಬೇಗನೆ ನಿಜಧಾಮ ಮಾರ್ಗವ ಪಿಡಿದು ॥
ಆಗಲಾಗತಜನರವಳ ಪೊಗಳುತ ।
ಮಃಊಗಿನೊಳ್ ಬೆರಳಿಟ್ಟು ಬೆರಗಾಗುತ್ತ ॥೨॥

ತದನಂತರ ಮಂಡನಮಿಶ್ರರು ಗುರುಗಳ ಆಜ್ಞೆಯಂತೆ ವರ್ತಿಸಿದ್ದು:—

ಮುನ್ನಣೆ ಪಡೆದಿಹ ಮಂಡನಮಾನ್ಯ ।
ಸನ್ನುತ ಸರ್ವಜಿನ್ನಾಮಕ ಜನ್ನ ॥
ವನ್ನು ಮಾಡಿ ತನ್ನ ಸಂಪತ್ತೆಲ್ಲವನು ।
ಚನ್ನಿಗ ವಿಪ್ರರ್ಗೆ ಮಾಡಿ ದಾನವನು ॥೩॥

ಗದ್ಯಂ। ತದನಂತರೇ ಮಂಡನಪಂಡಿತೋಪಿ ಶ್ರೀಮತ್‌ಭಗವತ್ಪಾದ ಶಂಕರಾಚಾರ್ಯೇಣ ಸನ್ಯಾಸಂ ಯಥಾಕ್ರಮೇಣ ಸ್ವೀಕೃತ್ಯ ಸುರೇಶ್ವರಾಚಾರ್ಯ ಇತಿ ನೂತನ ನಾಮಧೇಯಮವಾಪ ॥೧॥

ಶೃಂಗೇರಿಯ ವರ್ಣನೆ:—

ಸಾಕಿ॥ ಶ್ರಿಂಗೇರಿಯ ಕ್ಷೇತ್ರವು ಸಹ್ಯಾದ್ರಿಯ। ತುಂಗಶಿಖರ ವಿಸ್ತರದೊಳ್ ।
ತುಂಗಾ ಭದ್ರಾ ಎಂಬ ನದಿಗಳುಗ।ಮಂಗಳ ತಾಣದ ಬಳಿಯೊಳ್ ।
ನೆಲಸಿಹುದಿದು ತಪದಿಂ ಬಲದಿಹ ಯೋಗೀಂದ್ರರ ನಿಲಯಂ ॥೧॥
ಸಂಗರಹಿತ ವರಶೃಂಗಋಷಿಯಜನ। ಕಂಗಡ ವಿಭಾಂಡಕಸುತಾಂ ।

ಮಂಗಳಕರಮಾದೀ ತಾಣವು ತಡ | ವಂಗೈದಿಹ ಕ್ಷೇತ್ರಕಣಾ ||
ಮಹರ್ಷಿಯಾಶ್ರಮವು ಕೇಳ್ ಭವ|ತಾಪಕೆ ವಿಶ್ರಮವು ||೨||

ದಿಂಡಿ|| ಗುರು ಮಠಸ್ಥಾಪಿಸೆ ವಿಚಾರ ಮಾಡಿ |ವರವಾಹೀಸ್ಮತಿಯು ತ್ಯಾಗವಾಡಿ||
ಚರಿಸುತ ಭಾಷ್ಯಪ್ರಚಾರ ವಾಡಿ | ಶಿರಿಯುತಶ್ರಿಂಗೇರಿಕ್ಷೇತ್ರನೋಡಿ ||೩||

ಶ್ರಿಂಗೇರಿ ಮಠಸ್ಥಾಪನೆ, ಶ್ರೀಮತ್ ಸುರೇಶ್ವರಾಚಾರ್ಯರನ್ನು ಜಗದ್ಗುರು ಪೀಠದ ಮೇಲೆ ಕೂಢ್ರಿಸಿದ್ದು:—

ಪದ— ರಾಗ— ತಾಳ ಬಿಲಂದಿ

ಪಟ್ಟಣಶ್ರಿಂಗೇರಿಯಲ್ಲಿ ಶಂಕರ ಪರಿವ್ರಾಟ್ಟರು ಮಠವನ್ನು ಕಟ್ಟಿಸಿ |
ಪಟ್ಟಶಿಷ್ಯಸುರೇಶ್ವರಾಚಾರ್ಯರ| ಪಟ್ಟದ ಮೇಲೆ ತಾವ್ ಕೂಢ್ರಿಸಿ ||ಪಲ್ಲ||
ಸುಂದರ ಮಂದಿರವೊಂದನು ಸ್ಥಾಪಿಸಿ | ನಂದದೆ ಶಾರದಾದೇವಿಯು |
ನಂದುನಿಲಿಸಿ ಬಂದ ಯತಿಗಳಾದೇವಿಯ|ನಂದುವೊದಲು ಪೂಜಿಸುವದಾಕೆಯ
ಪೆಸ|ರಿಂದ ಪೀಠವೆಯನು ಪೊಂದುವದು ||೧||
ಆ ದಿನದಾರಭ್ಯಮೇದಿನಿಯೊಳು ಪರಶಾರದೆ ಮಠದಧಿ ದೇವಿಯಾಗೆ|
ಮೋದದಾಯಕ ಭಾರತಿಸರಸ್ವತಿಯಭಿ|ಧಾನಗಳಾಮಠಸ್ವಾಮಿಗಳ್ಗೆ ||೨||
ಈ ತೆರದೊಳು ನೇಮ ಮಾಡಿಯಾದ್ಯರು ಭಾಷ್ಯ|ವಾರ್ತಿಕ ರಚನೆಯ ಮಾಳ್ಪುದೆಂದು ||
ಭೂತಳಸುರಗುರುಸುರೇಶ್ವರಾಚಾರ್ಯ| ಯತಿವರಗಾಜ್ಞೆಯನಿತ್ತರಂದು ||೩||

ಪದ್ಮಪಾದಾದಿಶಿಷ್ಯರು ಆಚಾರ್ಯರಿಗೆ ವಿನಂತಿ ಮಾಡಿಕೊಳ್ಳುತ್ತಾರೆ:—

ಸಾಕಿ|| ಕಟ್ಟಪ್ಪಣೆ ಮತ್ತುಳಿದ ಶಿಷ್ಯರಿಗೆ| ಮುಟ್ಟಲು ಗುರುಗಳ್ಗವರು |
ಸ್ಪಷ್ಟವಿನಂತಿಯನಿಟ್ಟರು ವಾರ್ತಿಕ ಕಟ್ಟಲ್ಕನರ್ಹರವರು ||೧||
ಕರ್ಮಪ್ರಶಂಸೆಯನು ಮಾಡುತ ನಿ | ಷ್ಕರ್ಮವ ತಾಂ ಮನ್ನಿಸದ|
ಮರ್ಮವರಿತು ಹಸ್ತಾಮಲಕಾದ್ಯರಿಂ| ನಿರ್ಮಿಸುವದು ವಾರ್ತಿಕವಂ ||೨||

ಶಂಕರಾಚಾರ್ಯರು ಉಳಿದ ಮುಖ್ಯಶಿಷ್ಯರಿಗೆ ಹೇಳುತ್ತಾರೆ:—

ರಾಗ—ಕೇದಾರ. ತಾಳ—ಝುಂಪಾ

ತಾತ್ವಿಕದ ಮಮಭಾಷ್ಯವಾರ್ತಿಕವ ರಚಿಸುವೊಡೆ |
ಛಾತ್ರವೃಂದದೊಳಾರು ಪಾತ್ರರಿಲ್ಲವು ನೋಡೆ ||೧||
ಪ್ರಾಜ್ಞರರಿತಾಪರಪ್ರತಿಜ್ಞೆಯಾಗಿಹ ಭಾಷ್ಯ
ತಜ್ಞತೆಯನರಿತರ್ ಸುರೇಶ್ವರಾಚಾರ್ಯರು ||೨||

ಹೀಗೆಂದು ಪೇಳಿ ಗುರು ಸಾಗುತ ಸುರೇಶ್ವರ |
ಯೋಗಿಯಿರುವಾತಾಣಕಾಗಮಿಸಿದರ್ ಜವದಿ ||೩||

ಶಂಕರಭಗವತ್ಪಾದರು ಸುರೇಶ್ವರಾಚಾರ್ಯರಿಗೆ ಹೀಗೆ ಹೇಳುತ್ತಾರೆ:—

ಸಾಕಿ|| ಎಮ್ಮ ಶಿಷ್ಯಜಯವೆಮ್ಮಯ ಭಾಷ್ಯಕೆ | ನಿಮ್ಮಿಂದಂ ವಾರ್ತಿಕವಂ|
ಗಮ್ಮನೆ ಬರಿಸಲು ಸಮ್ಮತಿ ಕೊಡದಿಹ | ರೊಮ್ಮೆಯವರ ಸಂಶಯವಂ
ನಿವೃತ್ತಿಮಾಳ್ಪಂತೆ ನಿವೃತ್ತಿಗ್ರಂಥವ ಬರೆವಂತೆ ||೪||
ಪೂರ್ವಾಶ್ರಮದೊಳ್ ಪೂರ್ವಕರ್ಮಪ್ರವೃತ್ತಿಯವರು ತಾವೆಂದು |
ಭಾವಿಸುತಂ "ನೈಷ್ಕರ್ಮ್ಯಸಿದ್ಧಿ" ಗ್ರಂಥಾವಿರ್ಭವಿಸಿದುದೆಂದು ||||೫||

ಶಂಕರಾಚಾರ್ಯರು ಸುರೇಶ್ವರಾಚಾರ್ಯರು ಬರೆದ ನೈಷ್ಕರ್ಮ್ಯಸಿದ್ಧಿಗ್ರಂಥವನ್ನು
ನೋಡಿ, ಆನಂದಪಟ್ಟು ತಮ್ಮ ಶಿಷ್ಯರಿಗೆ ತೋರಿಸಿದ್ದು:—

ದಿಂಡಿ|| ಬರೆದಿಹ ನೈಷ್ಕರ್ಮ್ಯಸಿದ್ಧಿಯನ್ನು|
ಗುರುವೋದಲು ತಾಳಿ ಮೋದವನ್ನು ||
ವರಶಿಷ್ಯರ್ ನೋಡಿ ಗುರುಗಳಂತೆ|
ಬೆರಗಾದರು ಅದ್ವೈತ ತತ್ವದಂತೆ || ೧ ||

ಮಹಾರ್ಯತಿವರೇಣ್ಯ ಶ್ರೀವಿದ್ಯಾರಣ್ಯಸ್ವಾಮಿಗಳು ಬರೆದ
ಶಂಕರವಿಜಯ ೧೩ನೇ ಸರ್ಗದಲ್ಲಿ ಹೀಗೆ ಅನ್ನುತ್ತಾರೆ:—

ಶ್ಲೋಕ||ಇತ್ಯುಕ್ತ್ವೋಪರತೇ ಸುರೇಶ್ವರ ಗುರೌ ತೇ ನೈವ ಶಾರೀರಕೇ|
ನೋ ಸಂಭಾವ್ಯಮಹಾತ್ರವಾರ್ತಿಕಮಿತಿ ಪ್ರೌಢಂ ಶುಗಾಗ್ನಿಃ ಶನೈಃ ||
ಧೀರಾಗ್ರ್ಯಃ ಶಮಯನ್ವಿವೇಕ ಪಯಸಾ ದೇವೇಶ್ವರೇಣತ್ರಯೀ |
ಭಾಷ್ಯೇಕಾರಯಿತುಂ ಸವಾರ್ತಿಕಯುಗಂ ಬದ್ಧಾದರೋಭೂನ್ಮುನಿಃ||೧||(೬೩)

ವಿದ್ಯಾರಣ್ಯರು ಬರೆದ ಶ. ವಿ. ೧೩ನೇಸರ್ಗದಲ್ಲಿ ಆಚಾರ್ಯರು ಹೀಗೆಅನ್ನುತ್ತಾರೆ.

ಶ್ಲೋಕ|| ಸತ್ಯಂಯದಾತ್ಥ ವಿನಯಿನ್ಮಮಯಾಜುಷೀಯಾ |
ಶಾಖಾತದಂತಗತಭಾಷ್ಯನಿಬಂಧ ಇಷ್ಟಃ ||
ತದ್ವಾರ್ತಿಕಂ ಮಮಕೃತೇ ಭವತಾ ಪ್ರಣೇಯಂ |
ಸಚ್ಚೇಷ್ಟಿತಂ ಪರಹಿತೈಕ ಫಲಂ ಪ್ರಸಿದ್ಧಂ ||೨|| (೬೫)
ತದ್ವತ್ತ್ವದೀಯಾಖಿಲಕಾಣ್ವಶಾಖಾ |
ಸಮಾಪಿತಶ್ರಾಸ್ತಿತದಂತಭಾಷ್ಯಂ||

ತದ್ವಾರ್ತಿಕಂ ಚಾಪಿವಿಧೇಯಮಿಷ್ಟಂ |
ಪರೋಪಕಾರಾಯ ಸತಾಂ ಪ್ರವೃತ್ತಿಃ || ೩ || (೬೬)

ವೃತ್ತಂ|| ಆಚಾರ್ಯಾಜ್ಞೆಯನಾಂತು ವಾರ್ತಿಕಯುಗಂ ದೇವೇಶ್ವರನ್ನಿರ್ಮಿಸು|
ತ್ತಾಚಾರ್ಯಕೃತದಕ್ಷಿಣಾಮೂರ್ತಿ, ಪಂಚೀಕರಣ ಗ್ರಂಥಾದಿಗ ||
ಳ್ಗಾಚಾರ್ಯರ್ ಬರೆದರ್ ಮನೋಹರ ಸುವಾರ್ತಿಕ್ಯಂಯಶಃಸಾರ್ಥಕಮ್ |
ಆಚಾರ್ಯೋಹ್ಯುಪನಾಮಧಾರಕ ಕೃತೋದ್ಯೋಗಂ ವಲಂ ಸಮ್ಮತಂ||೪||

ಶ್ರೀ ಸುರೇಶ್ವರಾಚಾರ್ಯರು ೭೯೯ ವರ್ಷ ಶ್ರಿಂಗೇರಿ ಪೀಠದ
ಮೇಲೆ ಇದ್ದು ಪಟ್ಟಶಿಷ್ಯ ಸರ್ವಜ್ಞ ಮುನಿಗಳ್ಗೆ ಸಿಂಹಾಸನವನ್ನು
ಕೊಟ್ಟು ತಾವು ಸಮಾಧಿಸ್ಥರಾದರು:—

ಭಾಮಿನಿ ಷ|| ಖ್ಯಾತಯೋಗಿ ಸುರೇಶ್ವರರುಪ್ರ|
ಖ್ಯಾತ ಶ್ರಿಂಗೇರಿಯ ಮಠದವಿ |
ಖ್ಯಾತ ಸಿಂಹಾಸನವ ವಿಕ್ರಮಶಕದ ಮೂವತ್ತು ||
ಚೈತ್ರಪೌರ್ಣಮೆ ವಿಜಯನಾಮ ಸಂ|
ವತ್ಸರದೊಳೇರುತ್ತಲೆಣ್ನೂರ್|
ವತ್ಸರಕ್ಕೊಂದಬ್ದಮುಳಿವಂತಾಳ್ದು ಪೀಠವನು||
ಒದವಿದೇಳ್ನೂರಕ್ಕೆ ಉಳಿದಿಹ|
ವಯ್ದು ವರುಷವು ಶಾಲಿವಾಹಪ್ರ|
ಮಾದಿವತ್ಸರ ಮಾಘಸಿತ ದ್ವಾದಶಿಯ ತಿಥಿಯಲ್ಲಿ||
ಮೋದದಲಿ ಸರ್ವಜ್ಞಮುನಿವರ |
ಗಾದಿನದೆ ಸಿಂಹಾಸನವನಿ|
ತ್ತಾದಯಾಂಬುಧಿ ಯೋಗಬಲದೆ ಸಮಾಧಿಪೊಂದಿದನು ||೨||

ಸುರೇಶ್ವರಾಚಾರ್ಯರು ಬರೆದ ಗ್ರಂಥಗಳ ಪೆಸರಂ ಸಂಕ್ಷೇಪದಿಂ ಸೂಚಿಪಪದ್ಯಂ—

ಭಾಮಿನಿ ಷ|| ಮೊತ್ತ ಮೊದಲು ಸುರೇಶ್ವರರು ತಾವ್|
ಸತ್ಯವೆನ್ನುತ ಕರ್ಮಮಾರ್ಗಪ್ರ|
ವೃತ್ತಿ ಪೇಳುವ ಗ್ರಂಥವೆರಡು ವಿವೇಕನಾಮದೊಳು||
ವೃತ್ತಿಯೊಂದನು ಬ್ರಹ್ಮಸೂತ್ರಕೆ|
ಚಿತ್ತವಿಡುತಾ ಸಿದ್ಧಿಯೆರಡನು|
ಬಿತ್ತರಿಸಿ ವಾರ್ತಿಕವ ನಾಲ್ಕನು ನಿರ್ಮಿಸಿದರಿವರು ||೧||

(೧) ಪೂರ್ವಾಶ್ರಮದಲ್ಲಿ ಬರೆದ ಗ್ರಂಥಗಳು:—

೧ ವಿಧಿವಿವೇಕ ೨ ವಿಭ್ರಮವಿವೇಕ.

(೨) ಸನ್ಯಾಸಗ್ರಹಣ ಮಾಡಿದನಂತರ ಬರೆದವುಗಳು:—

೧. ನೈಷ್ಕರ್ಮ್ಯಸಿದ್ಧಿ ೨. ಬ್ರಹ್ಮಸಿದ್ಧಿ ೩. ಬೃಹದಾರಣ್ಯಕೋಪನಿಷದ್ಭಾಷ್ಯ ವಾರ್ತಿಕಮ್ ೪. ತೈತ್ತರಿಯೋಪನಿಷದ್ಭಾಷ್ಯವಾರ್ತಿಕಮ್ ೫. ದಕ್ಷಿಣಾ ಮೂರ್ತಿಸ್ತೋತ್ರವಾರ್ತಿಕಮ್ ೬. ಪಂಚೀಕರಣವಾರ್ತಿಕಮ್.

ಉಪಸಂಹಾರ:—

ಭಾಮಿನಿ ಷ|| ಆದ್ಯವಾದೀ ವೇದಧರ್ಮವು|
ಬೌದ್ಧಧರ್ಮದ ಹೊಡತದೊಳಗೆ ನಿ|
ಬದ್ಧವಾಗಿರೆ ಬಿಡಿಸಿದರು ದೇವೇಶ್ವರರು ಬೇಗ ||
ಆದ್ಯಮತವಿದು ಆದ್ಯಗುರುವಿವ |
ರಾದ್ಯವಾರ್ತಿಕಕಾರರಿವರೀ |
ಬೌದ್ಧಧರ್ಮದೆ ವೇದಧರ್ಮೋದ್ಧಾರ ಗೆಯ್ದವರು ||೧||
ವೇದಧರ್ಮವನನುಸರಿಸಿವರ |
ವೇದಶಾಸ್ತ್ರಸ್ಮೃತಿಪುರಾಣಗ |
ಳೋದಿವೈದಿಕ ಧರ್ಮಪುನರುಜ್ಜೀವನವ ಗೆಯ್ದ||
ಆದಿ ಬಹುಮಾನವು ಮಲಂ ಶ್ರೀ|
ವೇದಮೂರ್ತಿ ಕುಮಾರಿಲರಿಗೀ|
ಯಾದ್ಯಗುರು ಶ್ರೀಶಂಕರಾಚಾರ್ಯ, ಸುರೇಶ್ವರಾಚಾರ್ಯರಿಗೆ ||೨||

ಮಂಗಳಾರತಿ:—

ಶ್ರೀಮತ್ ಭಾರತಿದೇವಿಯ ಮೇಲೆ— ಆನಂದಾಚಾಕಂದಹರಿಹಾ| ಎಂಬಂತೆ

ಆರತಿ ಬೆಳಗಿರಿ | ಭಾರತಿದೇವಿಗೆ | ಸಾರಸಮುಖಿಯರು ಹರುಷದಲಿ ||ಪಲ್ಲ|| ಚಾರುಗಾತ್ರಿಯರು|ಕೋರುತ ವರವನು|ಸ್ಮೇರಮುಖದ ಶ್ರೀಶಾರದೆಗೆ||ಅ. ಪ.|| ಸುಂದರ ಹಿಮಸಖ | ಕಂದನ ಮೋಹಿಸ| ಬಂಧುರ ಲಗ್ನದ ಪತ್ರಿಕೆಯ | ನಂದದೆ ಬರೆದಾ| ಚಂದಿರವದನಗ | ಮಂದಾನಂದವನಿತ್ತಳಿಗೆ ||೧|| ವರವಾದವು ತಾ| ಜರುಗಲುಭಯರೊಳು | ಸುರುಚಿರ ಮುಖಿ ನೆರೆ ನಿರ್ಣಯದೊಳ್ || ಕರನಿಸ್ಪೃಹತೆಯನುರೆ ಪ್ರಕಟಿಸಿರುವ | ಪರತರ ಪಾವನ ಮೂರುತಿಗೆ || ೨ || ಶ್ರೀಮದಾದ್ಯಶಂಕರಾಚಾರ್ಯಗುರು | ಮಾಮುಹಿಮರ ವಿನತಿಯನೊಪ್ಪಿ | ಶ್ರೀಮತ್‌ಶ್ರಿಂಗೇರಿಯೊಳಂ ನೆಲಸಿಹ| ತಾಮರಸಾಂಬಕಿ ಸರಸ್ವತಿಗೆ ||೩||

||ಶ್ರೀಸುರೇಶ್ವರಾಚಾರ್ಯರ ಆರತಿ||

ರಾಗ—ಕೇದಾರಗೌಳ        ತಾಳ—ಬಿಲಂದಿ

ಮಂಗಲವೆನ್ನಿರಿ ಮಂಗಳ ಮಹಿಮಗೆ | ಸಂಗರಹಿತಗೆ ಭವ | ಭಂಗವಗೆಯ್ದ ಶ್ರೀಂಗೇರಿಪೀಠವೇರ್ದ||ಪಲ್ಲ|| ಅಂಗಜಾರಿಯು ತಾಪಹಿಂಗಿಸಿ ಭೂತಳ | ದಂಗುಬಡಿಸಿ ಧರ್ಮೋದ್ಧಾರಂಗೆಯ್ದವನಿಗೆ ||ಅ. ಪ|| ಗುರುಹಿಮಮಿತ್ರರ ಪುತ್ರ ಸುಂದರಗಾತ್ರ ಗುರುಶಂಕರಾರ್ಯಛಾತ್ರ | ಭಾರತಿದೇವಿ ವಿರಚಿತ ಪ್ರೀತಿಪಾತ್ರ || ವರಸಂಯಮೀಂದ್ರರೊಳ್ ಪರಮವೀತಿಹೋತ್ರ | ಕರುಣಾಕರವಿಷ್ಣುಮಿತ್ರ ಜಾಮಾತಗೆ||೧|| ಜನ್ನಿಗನಿಗೆ ಕರ್ಮಕಾಂಡಸ್ಥಾಪನೆ ಗೆಯ್ದ | ಮನ್ನಣೆ ಪೊಂದಿರ್ದಗೆ | ಸನ್ನುತ ವಾರ್ತಿಕವನ್ನು ಬರೆದವಗೆ || ಜನ್ನನಿವೃತ್ತಿಮಾರ್ಗವನು ಸ್ವೀಕರಿಸುತ | ಸನ್ಯಾಸ ನಾಮಯಥಾರ್ಥಗೆಯ್ದವನಿಗೆ ||೨|| ಪರಮಪಾವನ ಗುರು ಸುರಮುನಿವಂದಿತ ಚರಣಕಮಲ ದೇವಾ| ಕಾರುಣ್ಯಾಬ್ಧಿ ವರಭಕ್ತೋದ್ಧಾರಭಾವ || ಸುರುಚಿರವಿಶ್ವರೂಪೆಂಬ ತೊಟ್ಟಿಲನಾಮ | ತೊರೆದು ಸುರೇಶ್ವರೆಂಬುವ ನಾಮಧಾರಕಗೆ || ೩ ||

||ಶ್ರೀಮದಾದ್ಯಶಂಕರಾಚಾರ್ಯರ ಮೇಲಣ ಆರತಿ||

ಪದ—ರಾಗ.        ತಾಳ—ಆದಿ.

ಮಂಗಳ ಪಾಡಿರಿ ಮಂಗಳಾಂಗಿಯರು || ಸಂಗವರ್ಜಿತ ಭವಭಂಗಗುರುವರಗೆ ||ಪಲ್ಲ|| ಪ್ರೇಮದಿಯಮರುಕ | ಭೂಮಿಪನನು ಸು | ತ್ರಾಮಗೆ ಸರಿ ಮಾಡಿದ ಮಹಾಮಹಿಮಗೆ ||೧|| ಮಂಡನಪಂಡಿತರೊಡನೆ ವಾದವಂ | ಮಂಡಿಸಿ ಕರ್ಮವ ಖಂಡಿಸಿದವನಿಗೆ ||೨|| ಮಂತ್ರಿಪುರದಶ್ರೀ |ಶಾಂತವಸ್ಥಾಲಸಾ| ಕಾಂತದಯಾಪಾತ್ರ ಶಂಕರಾರ್ಯರಿಗೆ ||೩||

|| ಮಂಗಳಮಸ್ತು ||






